# "ಗ್ರಹಚಾರ"

ಅಥವಾ

## "ಮ್ಯಾನೇಜರ್—ಮುಕುಂದ್"



ನೂತನ ಸಾಮಾಜಿಕ ನಾಟಕ



ಲೇಖಕರು

ಬಿ. ಎಸ್. ರಾಮಸ್ವಾಮಿ ಅಯ್ಯಂಗಾರ್, ಬಿ.ಎ.

ಇದೇ ಗ್ರಂಥಕರ್ತರಿಂದ ವಿರಚಿತವಾದ

ಇತರ ಸಾಮಾಜಿಕ ನಾಟಕಗಳು.

| | | | | |
|---|---|---|---|---|
| "ಲೋಭಿ" | .... | ಬೆಲೆ | 8 | ಆಣೆ. |
| "ವಿಧಿ" | .... | ,, | 8 | ,, |
| "ವಂಚನೆ" | ... | ,, | 8 | ,, |
| "ವ್ಯಾಮೋಹ" | ... | ,, | 8 | ,, |
| "ನವೀನ ಸಮಾಜ" | .... | ,, | 8 | ,, |
| | ವಿಶೇಷಪ್ರತಿ | ,, | 12 | ,, |


ಪ್ರಕಾಶಕರು :—

**ನಾಟಕ ಸಾಹಿತ್ಯ ಸಂಘ,**

12 B, ತಂಬುಚೆಟ್ಟಿ ಬೀದಿ, ಜಾರ್ಜ್ ಟೌನ್, ಮದರಾಸು.

# "ಗ್ರಹಚಾರ"

ಅಥವಾ

# "ಮ್ಯಾನೇಜರ್ ಮುಕುಂದ್"

ನೂತನ ಸಾಮಾಜಿಕ ನಾಟಕ.

ಲೇಖಕರು:

**ಬಿ. ಎಸ್. ರಾಮಸ್ವಾಮಿ ಅಯ್ಯಂಗಾರ್, ಬಿ.ಎ.,**

ಪ್ರಕಾಶಕರು:

ನಾಟಕ ಸಾಹಿತ್ಯ ಸಂಘ,

12, B, ತಂಬುಚೆಟ್ಟಿ ಬೀದಿ, ಜಾರ್ಜ್ ಟೌನ್, ಮದರಾಸು.

(ಪ್ರಥಮ ಮುದ್ರಣ)

1938



**ಬೆಲೆ: ಎಂಟಾಣೆ**

# ಅ ರ್ಪ ಣೆ

" ಪಿ ತೃ ದೇ ವೋ ಭ ವ "

ನನ್ನ ಪೂಜ್ಯ ಪಿತೃವರ್ಯರ ಚರಣ ಸನ್ನಿಧಾನದಲ್ಲಿ.

—ಗ್ರಂಥಕರ್ತ.

# ಪೀಠಿಕೆ

ಕಷ್ಟಗಳಿಗೆ ನಾನಾ ರೂಪಗಳುಂಟು. ಕಷ್ಟಗಳ ಸಮಯ ನಿಯಮಗಳು, ಫಲ ಪರಿಣಾಮಗಳು, ಅನೇಕಾನೇಕ ವೇಳೆ ಮಾನವನ ದೃಷ್ಟಿಗೆ ಗೋಚರ ವಾಗದೆ ಇರುವುದುಂಟು. ಯಾವ ಕಾಲದಲ್ಲಿ, ಯಾರಿಗೆ, ಯಾವ ಬಗೆಯ ಕಷ್ಟವು, ಯಾವ ಯಾವ ಕಾರಣಗಳಿಂದ ಉಂಟಾಗಬಹುದೆಂಬುದನ್ನು ಸಂಪೂರ್ಣವಾಗಿ ತಿಳಿದುಕೊಳ್ಳುವ ಸೂಕ್ಷ್ಮಶಕ್ತಿಯು ಮಾನವನಿಗೆ ಇರು ವುದಿಲ್ಲ. ಎಷ್ಟೋ ಸಂದರ್ಭಗಳಲ್ಲಿ ಮಾನವನು ತನ್ನ ಭವಿಷ್ಯತ್ತು ತನ್ನ ಕೈಯಲ್ಲಿರುವುದೆಂದೂ, ಅದರ ರೀತಿ ನೀತಿ, ಫಲಪರಿಣಾಮಗಳನ್ನು ತಾನೇ ಇತ್ಯರ್ಥಗೊಳಿಸಿ ನಿರ್ವಹಿಸಿಕೊಳ್ಳುವ ಶಕ್ತಿಯು ತನಗಿರುವುದೆಂದೂ ಹಿಗ್ಗಿ ಹೀರೇಕಾಯಾಗಬಹುದು. ಆದರೆ, ಮಾನುಷ ಶಕ್ತಿಯನ್ನು ಮಿಂಚಿದ ಅತ್ಯ ದ್ಭುತ ಶಕ್ತಿಯು ಮತ್ತೊಂದಿರುವುದೆಂದೂ, ಆ ಶಕ್ತಿಯು ಅನೇಕ ಸಂದರ್ಭ ಗಳಲ್ಲಿ ಮನುಷ್ಯನ ಆಸೆಯ ತಳಹದಿಯನ್ನೇ ಕಿತ್ತೊಗೆದೋ, ಅಥವಾ, ಅನಿರೀಕ್ಷಿತವಾದ ಹಲವು ಸನ್ನಿವೇಶಗಳನ್ನು ತಂದೊಡ್ಡಿಯೋ, ಸಹಿಸಲಸದಳ ವೆಂದೂ, ಜೀವಿತದ ಅಂತಿಮಾವಸ್ಥೆಯೆಂದೂ ಪರಿಗಣಿಸಲ್ಪಡುವ ದುಷ್ಟ ಪರಿಸ್ಥಿತಿಯನ್ನು ಒಮ್ಮಿಂದೊಮ್ಮೆ ಮಾರ್ಪಡಿಸಿ, ಸುಖಸಂತೋಷಗಳನ್ನು ಮಾನವನಿಗೆ ನೀಡಬಹುದೆಂಮೂ, ಯಾರು ಬೇಕಾದರೂ ನಿಸ್ಸಂದೇಹವಾಗಿ ನಂಬಬಹುದು. ಪ್ರತಿಯೊಬ್ಬರ ದೈನಂದಿನ ಜೀವನದಲ್ಲಿಯೂ ಈ ವಿಷಯ ವನ್ನು ಸಮರ್ಥಿಸುವುದಕ್ಕೆ ಸಾಕಾದಷ್ಟು ಉದಾಹರಣೆಗಳು ಒಂದಲ್ಲ ಒಂದು ಕಾಲದಲ್ಲಿ ದೊರೆತೇ ದೊರೆಯುವುವು. ಇಂತಹ ಅದ್ಭುತ ಶಕ್ತಿಯೇ ದೈವಶಕ್ತಿ ಯೆಂದೆನಿಸುವುದು. ಇವರ ಮಹತ್ತನ್ನು ಅರಿತು ಅನುಭವಿಸಬಹುದೇ ಹೊರತು ಹೇಳಿಕೇಳುವುದರಿಂದ ಹಿತವು ಅಷ್ಟೊಂದು ಹೆಚ್ಚಿನದೆನಿಸುವುದಿಲ್ಲ.

ಕಥಾನಾಯಕನಾದ ಮುಕುಂದನ ಮನಸ್ಸು ಒಳಗಾದ ವ್ಯಸನ ಮಯ ಪರಿಸ್ಥಿತಿಯಲ್ಲಿ ಎಂತಹ ಜ್ಞಾನಿಗಳಾದರೂ ವಿಕಲ್ಪಕ್ಕೆ ಒಳಗಾಗ ತಕ್ಕುದೇ! ಆದರೂ ಮುಕುಂದನು ದೈವದ್ರೋಹಿಯಲ್ಲ. ಮಾನವ ಸಮೂಹ

ದಲ್ಲಿ ಕಂಟಕಪ್ರಾಯನಲ್ಲ. ಆತನ ಗ್ರಹಚಾರವು ಯಾರನ್ನು ಬೇಕಾದರೂ ಹಿಡಿಯಬಹುದು. ಕ್ರೂರಕರ್ಮಗಳಿಗೆ ಒಳಗಾದ ಮಾತ್ರದಿಂದಲೇ, ಕಷ್ಟಗಳು ಸ್ವಯಂಕೃತಾಪರಾಧವೆಂದು ತೀರ್ಪನ್ನಿತ್ತು, ಕಷ್ಟಕ್ಕೊಳಗಾದವರ ಮೇಲೆ ಕನಿಕರವನ್ನು ತೋರದೆ, ಕೈಹಿಡಿದೆತ್ತಿ ತಮ್ಮ ಸುಖದಲ್ಲಿ ಲೇಶಮಾತ್ರವನ್ನಾದರೂ ದುಃಖಿತರಿಗೆ ನೀಡದಿರುವುದು ಮಾನವ ಜೀವನಕ್ಕೇ ಕಳಂಕಪ್ರಾಯವಾದುದು. ಯಾವುದೇ ಕಾರಣದಿಂದಲಾಗಲಿ, ಕಷ್ಟಪಡುವವರು ಸುಖದಿಂದಿರುವವರಿಗೆ ಸಹಸ್ರ ತೆರನಾದ ಎಚ್ಚರಿಕೆಯನ್ನು ತೋರತಕ್ಕವರಲ್ಲವೆ ? ಈ ವಿಷಯವು ಮಾನವನ ಮನಸ್ಸಿನಲ್ಲಿ ಎಷ್ಟು ಶೀಘ್ರವಾಗಿ ಹೊಕ್ಕು ಪರಿವರ್ತನಕಾರಿಯಾಗುವುದೋ ಅಷ್ಟು ಶೀಘ್ರದಲ್ಲಿ ಸಮಾಜ ಕ್ಷೇಮವೂ ಮುಂದುವರಿಯುವುದರಲ್ಲಿ ಸಂದೇಹವಿಲ್ಲ.

ಮುಕುಂದನಂತೆ ಅನುಕೂಲಸ್ಥಿತಿಯಲ್ಲಿದ್ದು ಇದ್ದಕ್ಕಿದ್ದಹಾಗೆಯೇ ಒಂದರಮೇಲೊಂದು ಯಾತನೆಗೆ ಗುರಿಯಾಗಿ, ದಿಕ್ಕು ತೋರದೆ, ಎದ್ದು—ಬಿದ್ದು, ಕುಣಿದು—ಕುಪ್ಪಳಿಸಿ, ಕುಸಿದು-ಕಳವಳಗೊಂಡು, ಬಳಲಿ—ಬೆಂಡಾಗಿ, ಆತ್ಮಹತ್ಯೆಗೆ ಪ್ರಯತ್ನಿಸಿ, ಶಿಕ್ಷೆ ಪರೀಕ್ಷೆಗಳನ್ನು ಹೊಂದಿ, ಕಟ್ಟಕಡೆಯಲ್ಲಿ ಕರುಣಾಮಯನ ಕಟಾಕ್ಷವೀಕ್ಷಣೆಗೆ ಪಾತ್ರರಾದವರು ಎಷ್ಟೋ ಜನರು. ಇವರು ಬಡವರ ಸಮೂಹದಲ್ಲಿರಲಿ ; ಅಥವಾ ಶ್ರೀಮಂತರ ಕುಲದವರಾಗಿರಲಿ. ಇವರ ಕಷ್ಟಗಳೂ, ಅಂತ್ಯತಃ ಇವರಿಗೆ ದೊರಕುವ ಪುಣ್ಯಪಾಪ ಫಲಗಳೂ, ಸಮಾಜಜೀವಿಗಳನ್ನು ಸಾಕಾದಷ್ಟು ಎಚ್ಚರಿಸಬಹುದಲ್ಲವೆ ?

ಒಂದು ಮಾತನ್ನು ಮಟ್ಟಿಗೆ ಹೇಳದೆ ತೀರದು. ಎಷ್ಟೇ ಕಷ್ಟಗಳು ಪ್ರಾಪ್ತವಾದಾಗ್ಯೂ, ಆ ಕಷ್ಟಗಳಿಗೆ ಅರ್ಥವಿಲ್ಲದೆ ಇಲ್ಲ. ಕಷ್ಟಗಳ ಕಾರಣಗಳು ಕಾಲಾನುಕಾಲದಲ್ಲಿ ಹೊರಬಿದ್ದೇ ಬೀಳುವುವು. ಕಷ್ಟಗಳ ನಿಜಾಂಶವನ್ನರಿತರೆ ದೈವಲೀಲೆಯು ತಾನಾಗಿ ಹೊರಬೀಳುವುದರಲ್ಲಿ ಅಡ್ಡಿಯಿಲ್ಲ. ಈ ಸಂದರ್ಭದಲ್ಲಿ ಪುಣ್ಯಭಾರತದ ಭಕ್ತಾಗ್ರಣಿಗಳ ದಿವ್ಯ ಚರಿತೆಯು ಜ್ಞಾಪಕಕ್ಕೆ ಬಾರದಿರದು. ಜೀವನದ ನೆಲೆ, ಶಾಸನ, ನೀತಿ ತತ್ವಾರ್ಥ, ಮಾನವ ಧರ್ಮದ ಸೂಕ್ಷ್ಮ ಮತ್ತು ಆಧ್ಯಾತ್ಮಿಕ ಜ್ಞಾನದ ಅಂತರ್ಗತ ಭಾವಗಳನ್ನು ಹೊರಗೆಡಹಿ, ಮಾನವಕೋಟಿಯ ತನು ಮನ, ಜ್ಞಾನಮಾನಗಳ ಸಂಸ್ಕರಣೆಗಾಗಿ, ದಿವ್ಯ ಮೋಕ್ಷಸಾಮ್ರಾಜ್ಯ ಸಾಧನೆಗಾಗಿ, ಹಗಲಿರುಳೆನ್ನದೆ, ಅವರಿವರೆಂಬ ಬೇಧ

ಭಾವವನ್ನುಳಿದು, ಪರಹಿತವೇ ಸ್ವಹಿತವೆಂದೂ, ಪರರ ದುಃಖವೇ ತಮ್ಮ ದುಃಖವೆಂದೂ,ಆರ್ತರ ಶೋಕನಾಶವೇ ದೈವಜ್ಞಾನದ ಪರಮಾವಧಿಯೆಂದೂ ನಿರ್ಮಲಸೇವೆ, ಪ್ರತಿಫಲಾಪೇಕ್ಷೆಯಿಲ್ಲದ ತ್ಯಾಗ, ಇವೇ ಮಾನವನ ಅವಶ್ಯ ಕರ್ತವ್ಯವೆಂದೂ ಅರಿತು, ಜ್ಞಾನದೀಪವನ್ನು ಎಲ್ಲ ಕಾಲಕ್ಕೂ ಬೆಳಗಿಸಿ, ಪಾಪಪರಿಹಾರಕರೂ,ಚಿರಸ್ಮರಣೀಯರೂ, ಪೂಜಾರ್ಹರೂ ಆದ ಸ್ತ್ರೀ ಪುರುಷ ಪುರಾಣಪ್ರಸಿದ್ಧ, ಭಕ್ತ ರಾಮದಾಸ್, ತುಲಸೀದಾಸ್, ಸಾಧು ತುಕಾರಾಂ, ಭಕ್ತ ಪುಂಡರೀಕ, ದಾಮಾಜಿಪಂತ್, ಸತಿ ಅನಸೂಯ, ಸಕ್ಕೂಬಾಯಿ, ಸಾವಿತ್ರಿ, ಅಹಲ್ಯಾ, ದ್ರೌಪದಿ, ದಮಯಂತಿ ಮುಂತಾದ ಮಹನೀಯರೂ ಮಹಿಳೆಯರೂ ಮಾನವನ ಸ್ಮೃತಿಪಥದಿಂದ ಅಳಿಸಿಹೋಗತಕ್ಕ ವ್ಯಕ್ತಿಗಳಲ್ಲ. ಅವರ ದಿವ್ಯ ಜೀವನವು-ಅವರ ಅಸಾಧಾರಣ ಜ್ಞಾನಜ್ಯೋತಿಯು, ಭಾರತದ ಮೂಲೆ ಮೂಲೆಗಳಲ್ಲಿರುವ ಅಂಧಕಾರದ ಸಂಚಿತರಾಶಿಯನ್ನು ಮೂಲೋತ್ಪಾಟನ ಮಾಡಲಾರವೇ ? ಇಂತಹ ಪವಿತ್ರಕಾರ್ಯದಲ್ಲಿ, ಸಮಾಜಶೋಕ ನಿವಾರಣಾ ಕಾರ್ಯದಲ್ಲಿ, ನವಜ್ಞಾನದ ಉದಯದಲ್ಲಿ, ನವಯುಗದ ನವೀನ ಚೈತನ್ಯದ ಪುನರಾವಿರ್ಭಾವನೆಯಲ್ಲಿ,ಶಾಂತಿಸ್ಥಾಪಕ ಸತ್ಕಾರ್ಯದಲ್ಲಿ, ದೈವೀಕ ಭಾವನೆಯ ಅಭಿವೃದ್ಧಿಯಲ್ಲಿ, ಈ ಪುಟ್ಟಹೊತ್ತಗೆಯ ಸೇವೆಯು ಅಣುಮಾತ್ರವಾದರೂ ಆಗಬಹುದಾದರೆ ನಾನು ಕೃತಕೃತ್ಯನಾಗುತ್ತೇನೆ.

ಆಧುನಿಕ ಸಮಾಜ ಸಂಸ್ಕರಣ ಮತ್ತು ಪರಿವರ್ತನ ಕಾರ್ಯದಲ್ಲಿ ರಂಗಕ್ಷೇತ್ರವೂ ಮತ್ತು ಚಲಚ್ಚಿತ್ರಗಳೂ ಸಹಾನುಭೂತಿಯನ್ನು ತೋರಿಸಿ, ಕೇವಲ ಧನಾಭಿವೃದ್ಧಿಯ ದೃಷ್ಟಿಯನ್ನು ಮಟ್ಟಿಗೆ ಮುಂದಿಡದೆ, ತಮ್ಮ ಶಕ್ತಿಯನ್ನು ಮಿಂಚಿ ಸಮಾಜಸೇವೆಗೆ, ದೀನ ದರಿದ್ರರ ಸೇವೆಗೆ, ಆರ್ತರ ಶೋಕನಾಶಕಪ್ರಗತಿಗಳಿಗೆ, ಉದಾರಭಾವದಿಂದ ಬೆಂಬಲವನ್ನೀಯುವರೆಂಬ ಭರವಸೆಯನ್ನು ಹೊಂದಿರುವೆನು. ನಮ್ಮ ಕಾರ್ಯಗಳು ಆದಷ್ಟು ಸ್ವಾರ್ಥ ರಹಿತವಾಗಿದ್ದಲ್ಲಿ ಅವಕ್ಕೆ ದೈವದ ಬೆಂಬಲವು ತಾನಾಗಿಯೇ ಒದಗುವುದೆಂಬುದೇ ನನ್ನ ನಂಬಿಕೆ.

ಮದರಾಸು.
10—4—1938

ಇತಿ ಸಜ್ಜನ ವಿಧೇಯ,
**ಗ್ರಂಥಕರ್ತ.**

# ಪಾತ್ರ ಪರಿಚಯ



| | | |
|---|---|---|
| 1 | ಮುಕುಂದ್ | .... N. J. ದಾಸ್ ಅಂಡ್ ಕಂಪೆನಿ ಮ್ಯಾನೇಜರ್ |
| 2 | ನಾರಾಯಣಲಾಲ್ ಜಗಜೀವನದಾಸ್ | N. J. ದಾಸ್ ಅಂಡ್ ಕಂಪೆನಿಯ ಮಾಲೀಕ |
| 3 | ರಾಮನಾಥಪಂಡಿತ್ | .... ,, ಹೆಡ್ ಅಕೌಂಟೆಂಟ್ |
| 4 | ರಘುವೀರಸಿಂಗ್ | .... ,, ಅ॥ ಮ್ಯಾನೇಜರ್ |
| 5 | ಶ್ರೀಧರ್ | .... ಮುಕುಂದನ ಅಣ್ಣ |
| 6 | ಅನಂತ್, ಎಂ.ಎ, ಬಿ.ಎಲ್., | .... ಮುಕುಂದನ ತಮ್ಮ (ಲಾಯರ್) |
| 7 | ಪ್ರಭಾಕರ್ | .... ಮುಕುಂದನ ಸ್ನೇಹಿತ (ಸಾಧು) |
| 8 | ಡಾ॥ ಮನೋಹರ್, M.B.B.S. | "ಮನೋಹರ್ ಫಾರ್ಮಸಿ"ಯ ಮಾಲೀಕ್ |
| 9 | ಮಾಧವ | .... ಶ್ರೀಧರನ ಭಾವಮೈದ |
| 10 | ಪಾಂಡುರಂಗ್ | .... ಸಾಹುಕಾರ |
| 11 | ನಾರಾಯಣ | .... ಪಾಂಡರಂಗನ ಆಳು |
| 12 | ಆನಂದು | .... ಮುಕುಂದನ ಮಗ |
| 13 | ಸೀತಾ | .... ಮುಕುಂದನ ಹೆಂಡತಿ |
| 14 | ಲಲಿತ | .... ಮುಕುಂದನ ಹಿರಿಯ ಮಗಳು |
| 15 | ಶ್ಯಾಮಲ | .... ಮುಕುಂದನ ಕಿರಿಯ ಮಗಳು |
| 16 | ದಿನಸಿ ಅಂಗಡಿ ಧರಣಯ್ಯ | .... ಮುಕುಂದನ ಸಾಲಗಾರ |

## ಇತರ ಪಾತ್ರಗಳು

ಸುಂದರಮ್ಮ - ಶ್ರೀಧರನ ಹೆಂಡತಿ    ಅನಸೂಯ - ಅನಂತನ ಹೆಂಡತಿ

ಪುರೋಹಿತರು ಇತ್ಯಾದಿ





'ಲೋಭಿ', 'ವಿಧಿ', 'ವ್ಯಾಮೋಹ', 'ನವೀನ ಸಮಾಜ', 'ಗ್ರಹಚಾರ'
ಇತ್ಯಾದಿ ಸಾಮಾಜಿಕ ನಾಟಕಗಳ ಲೇಖಕರಾದ
ಶ್ರೀ. ಬಿ. ಎಸ್. ರಾಮಸ್ವಾಮಿ ಅಯ್ಯಂಗಾರ್, ಬಿ.ಎ., ಅವರು.

# "ಗ್ರಹಚಾರ"

ಅಥವಾ

## "ಮ್ಯಾನೇಜರ್—ಮುಕುಂದ್"

ಎಂಬ

## ನೂತನ ಸಾಮಾಜಿಕ ನಾಟಕ

---

**ದೃಶ್ಯ ೧]** **[ಸ್ಥಾನ: ಮುಕುಂದನ ಮನೆ**

[ಸನ್ನಿವೇಶ: ಲಲಿತೆಯ ಹುಟ್ಟಿದ ಹಬ್ಬದ ಕೋಲಾಹಲ]

**[ಪಾತ್ರಗಳು]**

ಮುಕುಂದ್, ಶ್ರೀಧರ್, ಅನಂತ್, ಪ್ರಭಾಕರ್, ಪಾಂಡುರಂಗ್, ಮಾಧವ್, ಡಾ|| ಮನೋಹರ್, ಜಗಜೀವನದಾಸ್ ದಂಪತಿಗಳು ಮತ್ತು ಅವರ ಆಳು, ಸೀತಾ, ಅನಸೂಯ, ಸುಂದರಮ್ಮ, ಲಲಿತ, ಶ್ಯಾಮಲ, ಆನಂದ್, ಪುರೋಹಿತರು.

[ಭೋಜನಾನಂತರ ಆಶೀರ್ವಾದ ಸಮಯ]

ಮು:—(ಪುರೋಹಿತರನ್ನು ನೋಡಿ) ತಡವೇಕೆ ಪುರೋಹಿತರೆ? ಮಗುವಿಗೆ ಆಶೀರ್ವಾದವಾಗಬಹುದಲ್ಲ?

ಪು:—ಆಗಬಹುದು ಮುಕುಂದರಾಯರೆ! ಅದಕ್ಕೇನು? ಅವಶ್ಯವಾಗಿ ಆಗಬಹುದು. ಎಲ್ಲರೂ ದಯಮಾಡಿಸಲಿ. ಲಲಿತಮ್ಮ ಬಂದು ಹಸೆಯ ಮೇಲೆ ಕೂತುಕೊಳ್ಳಲಿ.

ಮು:—ಲೋ ಆನಂದು!

ಆ:—(ಬಂದು) ಏನಪ್ಪಾ?

ಮು:—ಎಲ್ಲಿ ಕರೆಯೋ ಆನಂದು! ಎಲ್ಲರನ್ನೂ ಕರಿ; ಆಶೀರ್ವಾದಕ್ಕೆ ಬರ ಹೇಳ್ತಾರೇಂತ. ಎಲ್ಲರನ್ನೂ ಬರಹೇಳೋ? ಶ್ರೀಧರ ದೊಡ್ಡಪ್ಪನ್ನ ಅನಂತ ಚಿಕ್ಕಪ್ಪನ್ನ. ಆ ಪ್ರಭಾಕರ ಮಾವಾವ್ರನ್ನ, ಪಾಂಡು ರಂಗ ತಾತಾವ್ರನ್ನ; ಹಾಗೇ ಇನ್ನೂ ಯಾರ್ಯಾರಿದ್ದಾರೋ ನೋಡು ಊಟಮಾಡಿಯಾದವರು. (ಆನಂದು ಒಳಗೆ ಹೋಗುವನು)

ಮಾಧವ:—(ಪ್ರವೇಶಿಸಿ) ಎಲ್ಲರದೂ ಊಟವಾಯಿತು. ಆಶೀರ್ವಾದಕ್ಕೆ ಕರೀಲೇ ?

ಮು:—ಕರಿಯಪ್ಪಾ ಮಾಧು ! ( ಶ್ಯಾಮಲೆಯನ್ನು ಕರೆಯುವನು ) ಲೇ ಶ್ಯಾಮಲಾ !

ಶ್ಯಾ:—(ಬಂದು) ಕರೆದೆಯೇನಪ್ಪಾ ?

ಮು:—ಹೌದೇ, ಶ್ಯಾಮಲಾ! ಎಲ್ಲಿ ಹೆಂಗಸರನ್ನೆಲ್ಲಾ ಕರಿ. ಆಶೀರ್ವಾದ ಆಗುತ್ತೇಂತ ಹೇಳು.

ಶ್ಯಾ:—ದೊಡ್ಡಮ್ಮ, ಚಿಕ್ಕಮ್ಮ, ಎಲ್ಲರನ್ನೂ ಬರಹೇಳಲೇನಪ್ಪಾ ?

ಮು:—ಹೌದಮ್ಮಾ! ಹಾಗೇ ಅಮ್ಮನ್ನೂ ಕರಿ. ಇನ್ನೂ ಯಾರ್ಯಾರು ಇದ್ದಾರೆ ನೋಡು. ಎಲ್ಲರಿಗೂ ಹೇಳು. (ಲಲಿತೆಯನ್ನೂ ಕರೆಯುವನು) ಲಲಿತಾ! ಲಲಿತಾ! ಬಾಮ್ಮಾ !

(ಲಲಿತೆಯು ಬಂದು ಹಸೆಯಮೇಲೆ ಕುಳಿತುಕೊಳ್ಳುವಳು.)

(ಹೆಂಗಸರೆಲ್ಲರೂ ಬಂದು ಒಂದು ಕಡೆ ನಿಲ್ಲುವರು. ಗಂಡಸರೆಲ್ಲರೂ ಬಂದು ಮತ್ತೊಂದು ಕಡೆ ಕುಳಿತುಕೊಳ್ಳುವರು. ಮುಕುಂದನು ಬಂದವರನ್ನು ಸತ್ಕರಿಸಿ ಕುಳ್ಳಿರಿಸುವನು)

(ಶ್ರೀಧರನನ್ನು ನೋಡಿ) ಬಾಣ್ಣಾ, ಶ್ರೀಧರಣ್ಣಾ! (ಅನಂತನನ್ನು ನೋಡಿ) ಕೂತುಕೋಪ್ಪ ಅನಂತು! ಎಲ್ಲಿ ಅನಸೂಯ ಬರಲಿಲ್ಲವೇನು ?

ಅನಂತ್:—ಅಗೋಣ್ಣಾ! ಬಂದಿದ್ದಾಳೆ.

ಮು:—(ಮಾಧವನನ್ನು ನೋಡಿ) ಬಾಪ್ಪಾ, ಮಾಧು!

ಮಾ:—ಅಯ್ಯೋ, ನನಗೇನು ಮರ್ಯಾದೇಂದ್ರೆ? (ಲಲಿತೆಗೆ ಎದುರಾಗಿ ಕುಳಿತು ಕೊಳ್ಳುವನು. ಲಲಿತೆಯು ಅಸಮ್ಮತಿಯನ್ನು ಸೂಚಿಸಿ ಮುಖವನ್ನು ವಾರೆಮಾಡುವಳು).

ಪು:—(ಮಾಧವನನ್ನು ನೋಡಿ) ಸ್ವಲ್ಪ ಜರುಗಿ ಕೂರುಕೊಳ್ಳಿ ಮಾಧವ ರಾಯರೆ! ಇಲ್ಲಿ ಹೆಂಗಸರು ಆರತಿ ಎತ್ತೋದಕ್ಕೆ ಬರ್ತಾರೆ. (ಮಾಧವನು ಜರುಗುವನು).

ಮಾ:—(ಪ್ರಭಾಕರನನ್ನು ನೋಡಿ) ಬಾಪ್ಪಾ, ಪ್ರಭಾಕರ್! ಕೂತುಕೋ ಹಾಗೇ.

[ ಪ್ರವೇಶ: ಪಾಂಡುರಂಗ ]

ದಯಮಾಡಿಸಬೇಕು. ಅಂದಹಾಗೆ ತಮ್ಮ ದರ್ಶನ ಅಪರೂಪವಾಯಿತಲ್ಲಾ ಈಚೆಗೆ!

ಪಾಂ:—ಏನೋ ಹೀಗೇ ನೋಡಿ, ಬಿಡುವೇ ಇಲ್ಲ ಹಾಳುಸಂಸಾರಕ್ಕೆ; ತಾಪತ್ರಯ ಹೆಚ್ಚಾಗೋಯಿತು.

ಪ್ರ:—ತಮಗೆಂಥಾ ತಾಪತ್ರಯ ಸ್ವಾಮಿ? ಸಂಸಾರವೇ? ಸಾಲವೇ? ಸಾಹುಕಾರರಿಗೆ ಎಂಥಾ ತಾಪತ್ರಯ ಸ್ವಾಮಿ? ಅದರಲ್ಲೂ ಲಕ್ಷ್ಮೀಪುತ್ರರು ತಾವು!

ಪಾಂ:—ಹೌದೂಂದ್ರೆ! ನೋಡಿದವರಿಗೆ ಹಾಗೇ ಕಾಣುತ್ತೆ. ನನ್ನ ಕಷ್ಟ ಪರಮಾತ್ಮನೇ ಬಲ್ಲ ನೋಡಿ. ಮುಖ್ಯವಾಗಿ ಹೊತ್ತುಹೊತ್ತಿಗೆ ಅನ್ನ ಬೇಯಿಸಿ ಹಾಕೋದಕ್ಕೆ ಹೆಂಗಸೂಂತ ಒಬ್ಬಳಿಲ್ಲ ಮನೇಲ್ಲಿ. ಕಷ್ಟನಷ್ಟ, ನೋವುನುಡಿ, ಯಾರಲ್ಲಿ ಹೇಳ್ಕೊಳ್ಳೋದು ಸ್ವಾಮಿ? ಎಷ್ಟು ಹಣ ಇದ್ರೆ ಏನು ಫಲ ಹೇಳಿ?

ಶ್ರೀ:—ಸುಖವಾಗಿ ಇನ್ನೊಂದು ಮದುವೆ ಮಾಡಿಕೋಬಾರದಲ್ಲ ಪಾಂಡುರಂಗರಾಯರೆ?

ಪು:—ಆಹಾ! ಭೇಷಾಗಿ ಮಾಡಿಕೋಬಹುದು. ವಯಸ್ಸೂ ಏನಂಥಾ ಹೆಚ್ಚಿನದಲ್ಲ. ತಮಗೆಲ್ಲಾ ಒಂದು ನಲವತ್ತಾರು ನಲವತ್ತೇಳರ ಒಳಪಟ್ಟೇ ಇರಬೇಕೂಂತೀನಿ. ಹೌದೇ ಮಹಸ್ವಾಮಿ?

ಪಾಂ:—ಹಾಂ! ಅಷ್ಟೇ, ಅಷ್ಟೇ ನೋಡಿ. ಹೆಚ್ಚುಕಮ್ಮಿ ಅಷ್ಟೇ. ಸಣ್ಣವಯಸ್ಸಿನಲ್ಲಿಯೇ ಕೂದಲು ನೆರೆತುಹೋಯಿತು ನೋಡಿ........

ಪು:—ಎಲ್ಲಾದ್ರೂ ನೋಡೋಣಾಗಿದೆಯೇನೋ ಹೆಣ್ಣನ್ನ? ಸ್ವಲ್ಪ ಧಾಟಿಯಾಗಿರೋ ಹುಡುಗಿಯಾದ್ರೆ ವಯಸ್ಸಿನ ವ್ಯತ್ಯಾಸ ಅಷ್ಟಾಗಿ ಕಾಣೋ

ದಿಲ್ಲ ಅನ್ನಿ. ಅಂದಹಾಗೆ ನನಗೆ ತಿಳಿದಹಾಗೆ ಒಂದು ಹೆಣ್ಣಿದೆ. ಆದರೆ ಸ್ವಲ್ಪ ಕಪ್ಪು. ತಮ್ಮ ಮನಸ್ಸಿಗೆ ಹಿಡಿಯೋಮಟ್ಟು ಕಾಣೆ.

ಶ್ರೀ:—ಅವರಿಗೇನೆಂದ್ರೆ ಸಾಹುಕಾರರು! ನಾನು ತಾನೂಂತ ಯಾರು ಬೇಕಾದ್ರೂ ಹೆಣ್ಣು ಕೊಡ್ತಾರೆ. ಅವರಾಗಿ ಪ್ರಯತ್ನಿಸಲಿಲ್ಲಾಂತ ಕಾಣುತ್ತೆ.

ಪಾಂ:—ಅದೊಂದು ಭಾಗದಲ್ಲಿ ನಿಜಾನ್ನಿ. ಪ್ರಯತ್ನಿಸಿದ್ದರೆ ಯಾವುದಾದ್ರೂ ಆಗೋದು.

ಪ್ರ:—ಅಲ್ಲವೆ ಮತ್ತೆ?

ಅ:—(ಮುಕುಂದನನ್ನು ನೋಡಿ) ನಾನು ಬರೋವಾಗ ದಾರಿಯಲ್ಲಿ ಡಾ|| ಮನೋಹರ್‌ರವರು ಸಿಕ್ಕಿದ್ರಣ್ಣಾ. 'ಊಟ, ಆಶೀರ್ವಾದ ಎಲ್ಲಾ ನಡೀಲಿ, ನನಗಾಗಿ ಅವರು ಕಾಯೋದು ಬೇಡ. ಇವತ್ತೊಂದು ಅರ್ಜೆಂಟ್ ಟೈಫಾಯಿಡ್ ಕೇಸಿದೆ. ಅದನ್ನು ನೋಡಿಕೊಂಡು ನಿಧಾನ ವಾಗಿ ಬರ್ತೇನೆ', ಅಂತ ಹೇಳಿದ್ರಣ್ಣಾ!

ಮು:—(ಶ್ರೀಧರನನ್ನು ನೋಡಿ) ಆಶೀರ್ವಾದ ನಡೀ ಬಹುದೇನಣ್ಣಾ?

ಶ್ರೀ:—ಅದಕ್ಕೇನು? ಆಗಲೀಪ್ಪಾ!

ಪು:—(ಆಶೀರ್ವಚನ) ಓಂ ನಮಸ್ಸದಸೇ! ನಮಸ್ಸದಸ್ಪತಯೆ, ನಮಸ್ಸಖೀನಾಂ, ಪುರೋಗಾಣಾಂ ಚಕ್ಷುಸೇ, ನಮೋದಿವೇ, ನಮಪೃಥಿವ್ಯೈ, ಸಪ್ರಥಸ್ಸಭಾಂ ಮೇ ಗೋಪಾಯ–ಯೇಚಸಭ್ಯಾಸ್ಸಭಾಸದಃ, ತಾನಿಂದ್ರಿಯಾವತಃ ಕುರು, ಸರ್ವಮಾಯುರುಪಾಸತಾಂ, ಸರ್ವೇಜನಾಃ ಸುಖಿನೋ ಭವಂತು! ಸಮಸ್ತ ಸನ್ಮಂಗಳಾನಿ ಭವಂತು!

(ಆರತಿ)

**(ನೆರೆದಿದ್ದವರೆಲ್ಲರೂ ತಾಂಬೂಲವನ್ನು ಸ್ವೀಕರಿಸಿ ಒಳಗೆ ಹೋಗುವರು)**

**(ಮುಕುಂದನು ಹೊರಟವರಿಗೆ ನಮಸ್ಕರಿಸಿ ಕಳುಹಿಸುವನು)**

ಶ್ರೀ:—ಮುಕುಂದ! ಅಂದಹಾಗೆ ಲಲಿತೆ ಮದುವೇಗೆ ಏನಾದ್ರೂ ಏರ್ಪಾಡು ಮಾಡಿದ್ದೀಯೇನು? ಹದಿಮೂರು ವಯಸ್ಸು ತುಂಬಿತಲ್ಲಪ್ಪಾ! ಸಮ್ಮನೆ ಯಾಕೆ ಬೆಳಸಿಟ್ಟುಕೊಂಡಿರೋದು ಹುಡುಗೀನ್ನ? ವಯಸ್ಸಾದ ಹೆಣ್ಣೂಂತ ಎಲ್ಲರೂ ನಿಷೇಧ ಮಾಡ್ತಾರೆ ಆಮೇಲೆ.

ಮು:—ನಿಷೇಧದ ಮಾತು ಹಾಗಿರಲಿ. ಈಗ ನೋಡು; ಹಾಗೂ ಒಂದು ಪಕ್ಷ ಮದುವೆ ಮಾಡೋಣಾಂದ್ರೆ ಸರಿಯಾದ ವರ ಸಿಕ್ಕಲಿಲ್ಲ. ಅದಕ್ಕೆ ಮೇಲ್ಪಟ್ಟು ಈಗ ಒಂದೆರಡು ವರುಷದಿಂದ ನನಗೂ ಬಹಳ ಕಷ್ಟ ಬಂದ್ಬಿಟ್ಟಿದೆ, ಈ ಜಂಟಿಸಾಲಗಳು ತೀರಿಸಿ, ತೀರಿಸಿ.

ಶ್ರೀ:—ವರ ಯಾಕಪ್ಪಾ ಸಿಕ್ಕಲಿಲ್ಲ? ಎಲ್ಲಿಯಾದ್ರೂ ಪ್ರಯತ್ನ ಮಾಡಿದ್ದೀಯೇನು ?

ಮು:—ಮಾಡದೇನು ? ಯಾವುದೂ ಈ ವೇಳೆಗೆ ಅನುಕೂಲವಾಗಲಿಲ್ಲ; ಅಂದಹಾಗೆ, ಅಣ್ಣಾ! ಮದುವೆ ಏನಾದ್ರೂ ಒಂದು ಸಮಯ ನಿಶ್ಚಯವಾದ್ರೆ, ನೀನೇ ಸಹಾಯಮಾಡಬೇಕಾಗುತ್ತಣ್ಣಾ, ಒಂದು ಸಾವಿರ ರೂಪಾಯಿ ಮಟ್ಟಿಗಾದ್ರೂ. ಆಮೇಲೆ ಕೊಟ್ಟು ತೀರಿಸಿಬಿಡ್ತೇನೆ.

ಶ್ರೀ:—ನಿಮಗೆಲ್ಲಾ ತಮಾಷೆಯಾಗ್ಬಿಟ್ಟಿದೆ ಮುಕುಂದಾ! ನಾನೇನಾದ್ರೂ ರಾಶಿ ಕೂಡಿಟ್ಟಿದ್ದೇನೆಯೇ ಎಲ್ಲಿಯಾದ್ರೂ? ಮೊನ್ನೆ ನಮ್ಮ ಶೀನೂಗೆ ಒಂದೈದು ರೂಪಾಯಿ ಸ್ಕೂಲು ಫೀಸು ಸರಿಮಾಡಿಕೊಡೋ ವೇಳೆಗೆ ನನ್ನ ಪರದಾಟಾನ್ನ ದೇವರೇ ಬಲ್ಲ. ಆ ಐದು ರೂಪಾಯಿ ಆ ಸಮಯದಲ್ಲಿ ಐನೂರು ರೂಪಾಯಿ ಕಂಡ್ಹಾಂಗೆ ಕಾಣಿಸ್ತು; ನೋಡಪ್ಪಾ! ಹೀಗೆಲ್ಲಾ ಇದೆ. ನಿನಗೇನು ಗೊತ್ತಿಲ್ಲವೆ?

ಮು:—ಹೋಗಲಿ ಬಿಡಣ್ಣಾ ಈಗ್ಯಾಕೆ ಅದರ ಪ್ರಸ್ತಾಪ ?

ಶ್ರೀ:—ಮುಕುಂದ! ಅಂದಹಾಗೆ ಹೊರಗಡೆ ಏಕಪ್ಪಾ ವರನ್ನ ಹುಡುಕ್ಕೊಂಡು ಅಲಿಯೋದು? ಅದರಲ್ಲೂ ಹೊರಗಿನವರೂಂದ್ರೇ ದುಬಾರಿ ಖರ್ಚು! ನಮ್ಮ ಮಾಧೂನೇ ಇದ್ದಾನಲ್ಲಾ, ನನ್ನ ಭಾವಮೈದ! ಅವನಿಗೇ ಕೊಟ್ಟುಬಿಡು ಲಲಿತೇನ್ನ. ಇವರಲ್ಲಿ ನಿನ್ನ ಆಕ್ಷೇಪಣೆ ಏನು? ನೋಡು, ಅವನಿಗೆ ಅಣ್ಣತಮ್ಮಂದಿರೂಂತ ಇಲ್ಲ—ಆಸ್ತಿ ಹಂಚಿಕೊಳ್ಳೋವಕ್ಕೆ. ಏನೋ ತಕ್ಕಮಟ್ಟಿಗೆ ವಿದ್ಯೆ ಇದೆ. ದೇವರು ಕೊಟ್ಟಹಾಗೆ ಇದ್ದದ್ದರಲ್ಲಿ ಗದ್ದೆ, ತೋಟ, ಮನೆ, ಮಠ, ಒಂದು ನಾಲ್ಕು ಕಾಸು ಲೇವಾದೇವಿ, ಎಲ್ಲಾ ಇದೆ. ಅವನ ಕಾಲದಲ್ಲಿ ತಿನ್ನೋದಕ್ಕೇನೂ ಪೇಚಾಟವಿಲ್ಲ. ಇನ್ನೇನಪ್ಪಾ ನಿನ್ನ ಯೋಚನೆ? ಹುಡುಗ ಕಪ್ಪಾದ್ರೂ

ಇದ್ದವ್ರದ್ರಲ್ಲಿ ಸ್ವಲ್ಪ ಚಟುವಟಿಕೆಯಾಗಿದ್ದಾನೆ. ಕಪ್ಪಾಗಿದ್ರೇನು ? ಗಂಡು ಹುಡುಗ. ಅದೃಷ್ಟ ಚೆನ್ನಾಗಿದೆಯೋ ಇಲ್ಲವೋ ಇದ್ದವ್ರದ್ರಲ್ಲಿ?

( ಪ್ರವೇಶ: ಮಾಧವ )

ಮಾ:—(ಒಂದು ಲಡ್ಡುವನ್ನು ಕೈಯಲ್ಲಿ ಹಿಡಿದು ಅದರಲ್ಲಿಯ ಹರಳನ್ನು ಒಂದೊಂದಾಗಿ ಬಿಡಿಸಿ ತಿನ್ನುತ್ತ) ಭಾವ! ಭಾವ!

ಶ್ರೀ:—ಏನೋ ಮಾಧು?

ಮಾ:—ಭಾವ! ಅಕ್ಕ, ಸರಸು, ಶೇಷು, ಕಮಲು, ಚಿನ್ನು, ಪುಟ್ಟು, ಶೀನು, ಜಗ್ಗು, ಮಂಜುಳ, ಎಲ್ಲರೂ ಸಂಜೆಗೆ ಆರತಿ, ಅರಶಿನ ಕುಂಕುಮ, ಊಟ, ಎಲ್ಲಾ ತೀರಿಸಿಕೊಂಡು ರಾತ್ರಿ ಒಂದೇಸಲ ಮನೆಗೆ ಬರ್ತಾರಂತೆ. ನಿಮಗೆ ಹೇಳೂಂತ ಅಕ್ಕ ಹೇಳಿದ್ಲು.

ಶ್ರೀ:—ಹಾಗಾದ್ರೆ ನೀನ್ನಡಿಯೋ ಮಾಧು! ನಾನು ಬರ್ತೇನೆ.

ಮಾ:—ನಾನೊಬ್ಬನೇ ಮನೇಲಿ ಏನು ಮಾಡೋದು ಭಾವ? ಇಲ್ಲೇ ಇದ್ದು ಸಾಯಂಕಾಲಕ್ಕೆ ಆರತಿ, ಗೀರತಿ, ಎಲ್ಲಾ ನೋಡಿಕೊಂಡು ಊಟವಾದ ಮೇಲೆ ಅವರನ್ನೂ ಕರಕೊಂಡು ಬರ್ತೇನೆ ಭಾವ!

ಶ್ರೀ:—(ಮಾಧುವನ್ನು ಹೊರಗೆ ಕರೆದು) ಅಲ್ಲಪ್ಪೋ ಬೆಪ್ಪುಮುಂಡೇದೇ! ಲಲಿತೇನ್ನ ನಿನಗೆ ಕೊಟ್ಟು ಮದುವೆಮಾಡಿಸ್ತೇಕೊಂತ ಇಷ್ಟೊತ್ತೂ ಅವರ ಹತ್ತರ ಪೊಡ್ಕೋತಾ ಇದ್ದೀನಿ. ನೀನು ಬಹು ಜಾಣಾಂತೆಲ್ಲಾ ಹೇಳಿದೆ. ಒಂದು ನಿಮಿಷದಲ್ಲಿ ಅವರಿಗೆ ಬಿಚ್ಚಿ ತೋರ್ಸಿಬಿಟ್ಟೆಯಲ್ಲಾ ನಿನ್ನ ಹನುಮಂತನ ಬಾಲಾನ್ನ! ಹೆಂಗಸ್ನೋ ನೀನು ಆರತಿ ನೋಡೋದಕ್ಕೆ? ಸದ್ದುಗಿದ್ದು ಮಾಡದೇ ಮನೇಗೆ ನಡಿ. ನಾನು ಬರ್ತೇನೆ ಆಮೇಲೆ.

ಮಾ:—ಹಾಗಾದ್ರೆ ಲಲಿತೇನ್ನ ನಂಗ್ಮದುವೆ ಮಾಡಿಸ್ತೀರಾ ಭಾವ?

ಶ್ರೀ:—ಈಗ ಇರಲೀ ನಡೆಯೋ; ಪುರಾಣಾ ಓದಬೇಡಾ ಇಲ್ಲಿ.

(ಮಾಧು ಹೋಗುವನು)

(ಮುಕುಂದನನ್ನು ನೋಡಿ) ಏನೋ ನೋಡಪ್ಪ. ಇದಕ್ಕೂ ಜಾಸ್ತಿಯಾಗಿ

**ಏನು ಹೇಳಲಿ ನಿನಗೆ? ಒಟ್ಟಿನಲ್ಲಿ ಹುಡುಗ ಸಾಧು! ದೃಢಕಾಯನಾಗಿ**

ದ್ದಾನೆ. ಮೋಸ, ಪಿತ್ತಲಾಟ ಅಂಥಾ ಚಾಳಿಗಳೇನೂ ಅವನ ಹತ್ತಿರ ಇಲ್ಲ. ಎಲ್ಲಾ ಅವರಪ್ಪನ ಹಾಗೆಯೇ; ಹಳೇ ಮಾದರಿ. ಈಗಿನಕಾಲದ ಹುಡುಗರ ಹಾಗೆ ಫ್ಯಾಷನ್, ಗೀಷನ್ ಏನೂ ಗೊತ್ತಿಲ್ಲ ಅವನಿಗೆ. ಮುಖ್ಯ ಹುಡುಗನಿಗೆ ಸಾಲಸೋಲ ಇಲ್ಲ. ಹುಡುಗೀನೂ ಸೌಖ್ಯವಾಗಿ ಬಾಳುತ್ತೆ. ನಿನ್ನ ಹೆಂಡತೀನ್ನೂ ಒಂದು ಮಾತು ಕೇಳು. ನೀವು ಗಂಡಹೆಂಡಿರು ಒಪ್ಪಿದ್ರೆ ಹುಡುಗೀನೂ ಒಪ್ಪಿದಹಾಗೇ ಅಲ್ಲವೆ? ಏನೋ ನೋಡಪ್ಪ. ಇದರಮೇಲೆ ಇನ್ನೇನು ಹೇಳಲಿ? ಹುಡುಗನೂ ಲಲಿತೇನ್ನೇ ಮದುವೆ ಮಾಡ್ಕೋಬೇಕೂಂತ ಇಷ್ಟಪಡತಾನೆ. ಅವರಕ್ಕನ ಅಭಿಪ್ರಾಯವೂ ಹಾಗೆಯೇ.

(ಮಾಧು ಮತ್ತೆ ಪ್ರವೇಶಿಸುವನು.)

ಶ್ರೀ:—ಇದ್ಯಾಕೋ ಮಾಧು! ಹೋಗಲಿಲ್ಲವೇನೋ ಮನೇಗೆ?

ಮಾ:—ಹಸೂಗೆ ಹುಲ್ಲು ಹಾಕಬೇಕೇ ಭಾವ? ಬೀಗದಕೈ ಕೊಡಿ ಮನೇದು.

ಶ್ರೀ:—ನೀನ್ನಡಿಯೋ ಮಾಧು! ನಿನ್ನ ಹಿಂದೇನೇ ಬರ್ತೀನಿ. ಬೀಗದಕೈ ಜನಿವಾರದಲ್ಲಿ ಗಂಟುಬಿದ್ದುಹೋಗಿದೆ ಬಲವಾಗಿ. ಬಿಡಿಸೋದಕ್ಕೆ ಬರೋದಿಲ್ಲ.

ಮಾ:—ಬೇಗ ಬನ್ನಿ ಭಾವ! (ಎಂದುಕೊಂಡೇ ಹೋಗುವನು).

ಶ್ರೀ:—(ಮುಕುಂದನನ್ನು ನೋಡಿ) ಇನ್ನು ನಾನು ಹೊರಡಲೇನಪ್ಪಾ ?

ಮು:—ಹೊರಡುತ್ತೀಯೇನಣ್ಣಾ ? ರಾತ್ರಿ ಬೇಗ ಬಂದುಬಿಡು ಊಟಕ್ಕೆ. ನಾನು ಕಾದಿರ್‍ತೀನಿ ನಿನಗಾಗಿ.

ಶ್ರೀ:—ಎಲ್ಲಿ? ಅನಂತು ಹೊರಟುಹೋದನೇ ಆವಾಗಲೇ ?

ಮು:—ಲಾಯರುಗಳಿಗೂ ಡಾಕ್ಟರುಗಳಿಗೂ ವಿರಾಮವೆಲ್ಲಿ? ಅವನಿಗೆ ಹೈಕೋರ್ಟಿನಲ್ಲಿ ಕೇಸಿದೆಯಂತೆ ಈವತ್ತು. ಆಗಲೇ ಹೊರಟುಹೋದ.

ಶ್ರೀ:—ಸರಿ (ಎಂದುಕೊಂಡೇ ಹೊರಡುವನು)

[ಪ್ರವೇಶ: ಡಾ|| ಮನೋಹರ್]

ಮು:—ದಯಮಾಡಿಸಿ, ಡಾಕ್ಟರೇ! ಈಗತಾನೆ ಬಿಡುವಾದಹಾಗಿದೆ!

**ಡಾ||:—ಕ್ಷಮಿಸಬೇಕು. ಬರೋಣಾಂತ ಆಗ್ಲೇ ಹೊರಟೆ. ಯಾರೋ**

ಪೇಷೆಂಟ್ ಕಡೇವ್ರು ಬಂದುಬಿಟ್ರು. ಈಗ್ಲೂ ಫಾರ್ಮಸಿ ಹತ್ತರಲೇ ಇರಹೇಳಿ ಒಂದು ನಿಮಿಷ ಬಂದುಹೋಗೋಣಾಂತ............

ಮು:—ಹಾಗಾದ್ರೆ ಈಗಲೇ ಹೊರಟು ಬಿಡಬೇಕೇ? ಊಟ?

ಡಾ||—ಈಗ ತಾಂಬೂಲ ಮಟ್ಟಿಗೆ ತಕ್ಕೋತೀನೆ. ಊಟಕ್ಕೆ ರಾತ್ರಿ ಬರ್ತೀನೆ. ತಪ್ಪೋದಿಲ್ಲ.

ಮು:—ಲಲಿತ! ಲಲಿತಾ! ಬಾಮ್ಮಾ! ಡಾಕ್ಟರು ಬಂದಿದ್ದಾರೆ. ತಾಂಬೂಲ ಎಲ್ಲಾ ತಕ್ಕೊಂಡುಬಾಮ್ಮಾ.

(ಪ್ರವೇಶ:—ತಾಂಬೂಲಾದಿಗಳನ್ನು ಹಿಡಿದು ಲಲಿತೆ)

ಲಲಿತೆ:—ತಕ್ಕೋಳ್ಳಿ ಅಪ್ಪಾ !

ಮು:—ಇದ್ಯಾಕಮ್ಮಾ? ಕೊಡು ಡಾಕ್ಟರಿಗೇ. ಅವರಿಗೆ ನಮಸ್ಕಾರಮಾಡು. ಅವರ ಹಸ್ತಗುಣ, ಆಶೀರ್ವಾದ, ಎಲ್ಲಾ ಸರಿಯಾಗಿದ್ದ ಹೊತ್ತಿಗೇ ನಿನಗೂ ಇವತ್ತು ಹುಟ್ಟಿದ ಹಬ್ಬದ ಕೋಲಾಹಲ.

(ಲಲಿತೆಯು ಮನೋಹರನಿಗೆ ನಮಸ್ಕರಿಸಿ ತಾಂಬೂಲಾದಿಗಳನ್ನು ಕೊಡುವಳು. ಲಲಿತ ಮನೋಹರರು ಒಬ್ಬರನ್ನೊಬ್ಬರು ಪ್ರೇಮದೃಷ್ಟಿಯಿಂದ ನೋಡುವರು.)

ಡಾ||—ಅಪ್ಪಣೆಯಾದರೆ ನಾನು ಹೋಗಿಬರಲೆ ?

ಮು:—ಸಂತೋಷ! ಡಾಕ್ಟರೇ! ರಾತ್ರಿ ಬೇಗ ಬಂದುಬಿಡಬೇಕು. ತಮಗಾಗಿ ಕಾದಿರ್ತೀನೆ.

ಡಾ||—ಅವಶ್ಯವಾಗಿ ಬರ್ತೀನೆ. (ಎಂದು ಮತ್ತೊಮ್ಮೆ ಲಲಿತೆಯನ್ನು ದೃಷ್ಟಿಸಿ ನೋಡುತ್ತಾ ಹೊರಡುವನು)

ಪ್ರ:—ಮುಕುಂದ್! ಲಲಿತೇಗೂ ಡಾಕ್ಟರಿಗೂ ಬಹಳ ಚೆನ್ನಾಗಿದೆಯಪ್ಪಾ ವರಸಾಮ್ಯ! ಆದರೆ ಲಲಿತೆ ಒಪ್ಪಬೇಕಲ್ಲಾ! ಏನಮ್ಮಾ ಲಲಿತಾ?

ಲಲಿತ:—ಹೋಗಿ ಮಾವ! ನಿಮ್ಮದು ಯಾವಾಗಲೂ ಪರಿಹಾಸ್ಯ!

ಪ್ರ:—ಪರಿಹಾಸ್ಯವಲ್ಲವಮ್ಮಾ, ಪ್ರಮಾಣವಾಗಿ. ಹೇಳು; ಡಾಕ್ಟರನ್ನು ಮದುವೇ ಮಾಡ್ಕೋತೀಯೇನು ?

ಲಲಿತ:—ಬಿಡಿ ಮಾವಾವ್ರೆ! ಆ ಕಾಲಕ್ಕೆ ನೋಡ್ಕೊಳ್ಳೋಣ. (ಎಂದು ಕೊಂಡೇ ಒಳಗೆ ಹೋಗುವಳು)

ಮು:—ನನ್ನ ಮನಸ್ಸಿನಲ್ಲಿಯೂ ಹಾಗೆಯೇ ಇದೆ. ಡಾಕ್ಟರವರ ತಾಯಿಯವರೂ ಒಂದೆರಡು ಸಲ ಪ್ರಸ್ತಾಪವಾಡಿದ್ರು. ಇದಕ್ಕೆಮೇಲೆ ಡಾಕ್ಟರಿಗೂ ಇಷ್ಟವಿದೆಯಂತೆ. ಆದರೆ ಹುಡುಗಿ ಇನ್ನೂ ಸ್ವಲ್ಪ ಓದಿಕೊಳ್ಳಿ ಅಂತ ಅವರ ಅಭಿಪ್ರಾಯ. ಇದರಮೇಲೆ ದೈವೇಚ್ಛೆ !

ಪ್ರ:—ಇದೇನಪ್ಪ ಮುಕುಂದ್ ! ನಿನ್ನ ಜ್ಯೇಷ್ಠರು ಏನೋ ಆ ಮಾಧೂ ಸಮಾಚಾರ ಹೇಳ್ತಾ ಇದ್ರಲ್ಲ ಇಷ್ಟುಹೊತ್ತೂ. ಲಲಿತೇಗೆ ಅದು ಸ್ವಲ್ಪವೂ ಇಷ್ಟವಿಲ್ಲ. ಮಾಧೂ ಮಾತೆತ್ತಿದ್ರೆ ಉರಿದುರಿದು ಬೀಳ್ತಾಳೆ. ಏನೋ ನೋಡಪ್ಪಾ. ಹುಡುಗಿ ಇಷ್ಟಕ್ಕೆ ವಿರೋಧವಾಗದಂತೆ ನೋಡ್ಕೋ ; ಅಷ್ಟೇ.

ಮು:—ಪ್ರಭಾಕರ್! ತಿಳಿದೂ ತಿಳಿದೂ ನನ್ನ ಕೆರಳಿಸ್ತಾ ಇದ್ದೀಯಲ್ಲಾ?

ಪ್ರ:—ಹಾಗಂದ್ರೆ?

ಮು:—ಹೋಗಿ ಹೋಗಿ ಆ ಹುಡುಗನ ಮಾತು ಯಾತಕ್ಕೇಂದೆ? ಅವರ ಮನೆ ಕಾರ್ಪಣ್ಯವೋ ! ಆ ಹೊಟ್ಟೆಕಿಚ್ಚೋ ! ಅವರ ತಿಳಿಗೇಡಿತನವೋ ! ಸಾಕು. ಹುಡುಗನ ರೂಪ ಕೇಳಬೇಕಾಗಿಲ್ಲ. ಒಳ್ಳೇ ತೊಳೆವಕೆಂಡ ಬುದ್ಧಿ(ನೋ [illegible]ತಾಗ[illegible] ! ಈಗೊಂದು ನಿಮಿಷದಲ್ಲಿ ಗೊತ್ತಾಯಿತಲ್ಲಾ ಎಲ್ಲಾ ಬಿಡಪ್ಪಾ ಅಪ್ರಸ್ತಾಪಾನ್ನ ; ಕೇಳೋದಿಕ್ಕೇ ಅಸಹ್ಯವಾಗಿದೆ.

(ಪ್ರವೇಶ:—N. J. ದಾಸ್ ದಂಪತಿಗಳು)

(ಮುಕುಂದನು ಅವರನ್ನು ಮರ್ಯಾದೆಯಿಂದ ಸತ್ಕರಿಸುವನು)

(ಲಲಿತೆಯು ಅವರಿಗೆ ನಮಸ್ಕರಿಸಿ ತಾಂಬೂಲಾದಿಗಳನ್ನು ಕೊಡುವಳು)

N. J. ದಾಸ್:—(ಲಲಿತೆಯನ್ನು ನೋಡಿ) ಎಕ್ಸ್ಕ್ಯೂಸ್ ಮಿ ಲಿಟಲ್ ಗರ್ಲ್. ಐ ಹ್ಯಾವ್ ಬೀನ್ ರ್‍ಯಾದರ್ ಲೇಟ್. ದಟ್ ಈಸ್‌ಯುವರ್ ಪಪಾಸ್ ಮಿಸ್ಟೇಕ್! ಐ ಹ್ಯಾಡ್ ಟು ಡೂ ಮೋಸ್ಟ್ ಆಫ್ ಹಿಸ್ ವರ್ಕ್ ಮೈಸೆಲ್ಫ್. (Excuse me little girl ! I have been rather late. That is your Papa's mistake. I had to do most of his work myself).

ಲಲಿತೆ:—ಥ್ಯಾಂಕ್ ಯು ವೆರಿ ಮಚ್ ಸರ್ ! (Thank you very much sir !)

N. J. ದಾಸ್:—ವ್ಹಾಟ್ ಏಜ್ ಡು ಯೂ ಕಂಪ್ಲೀಟ್ ಟುಡೇ? (What age do you complete to day ?)

ಲಲಿತೆ:—ಥರ್ಟೀ಼ನ ಸರ್ ! (Thirteen sir !)

N. J. Das:—ಯೂ ನೋ಼ ಹಿಂದಿ ? (You know Hindi ?)

ಲಲಿತೆ:—ಐ ಹ್ಯಾವ್ ಬೀ಼ನ ಲರ್ನಿಂಗ್ ಹಿಂದಿ ಸರ್ ! (I have been learing Hindi sir!)

Mrs. N. J. ದಾಸ್:—ಹೂಂ ಆರ್ ಯೂ ಮ್ಯಾರೀಯಿಂಗ್ ? (Whom are you marrying?)

ಲಲಿತ:—ಗಾಡ್ ನೋ಼ಸ್ ! (God knows !)

N. J. ದಾಸ್:—ಯೂ ಆರ್ ಎ ಗುಡ್ ಗರ್ಲ್. ಲೆಟ್ ಗಾಡ್ ಬ್ಲೆಸ್ ಯೂ. (You are a good girl. Let God bless you). (ಮುಕುಂದನನ್ನು ನೋ಼ಡಿ) ಮಿಸ್ಟರ್ ಮುಕುಂದ್ ! ಐ ಆ್ಯಮ್ ರಿಯಲೀ಼ ವೆರಿ ಹ್ಯಾಪಿ ! ಐ ಷಲ್ ನೌ ಬಿ ಎಲಾಂಗ್. ಟೈಂ ಈಸ್ ಅಪ್. ಐ ಮಸ್ಟ್ ಲುಕ್ ಇನ್ಟು ಫಾರಿನ ಮೇ಼ಲ್ಸ್ ಟುಡೇ. (Mr. Mukund ! I am really very happy. I shall now be along. Time is up. I must look into foreign mails to day)

ಮು:....ಥ್ಯಾಂಕ್ ಯೂ ಸರ್. (Thank you sir.)



ದೃಶ್ಯ ೨] [ಸ್ಥಾನ: ಬೀದಿ

[ಪ್ರವೇಶ:— ಪಾಂಡುರಂಗನ ಸೇವಕ: ನಾರಾಯಣ]

ನಾ:—(ಸ್ವಗತ) ನನ್ನ ಅಣೇಲ್ ಬರದದ್ದು ಈ ಚಾಕರಿ! ಸಾವುಕಾರ ಪಾಂಡುರಂಗಪ್ನೋರ ಬಾಕೀ ವಸೂಲೀ ಕೆಲಸವೋ! ನನಗಂತೂ ಬರ ಬರತಾ ಬೋ ಬೇಸರಾ ಉಟ್‌ಬುಟ್ಟೈತೆ. ಅಲ್ಲಾ! ಲೋಕದಾಗೆ ನ್ಯಾಯವಾಗಿ ಅಣ ಕೊಡೋದೂ ತಿಕ್ಕೊಳ್ಳೋದೂ ಉಂಟು. ಆದ್ರೆ ನಮ್ಮೆಜಮಾನ್ರ ಕತೆ ಅಂಗಲ್ಲ. ಸಾಲ ಕೊಡೋವಾಗ ಸತಾಯಿಸಿ ಸತಾಯಿಸಿ ಕೊಡ್ತಾರೆ. ತೆಕ್ಕೊಳ್ಳೋದೋ ಎಲ್ಲಾ ಡಬ್ಬಲ್ ಬಾಂಡು ಗೋಳೀ! ಡಬ್ಬಲ್ ಬಡ್ಡಿಗೋಳೀ! ಅಣ ವಾಪಸ್ಸು ತೆಕ್ಕೊಳ್ಳೋ ವಾಗ್ಳೋ ಒಂದು ಪೀಡಿಸ್ತಾರೇ ಅಂಗೆ ಪೀಡಿಸ್ತಾರೆ—ಬಾಕೀದಾರೀ ಗೋಳ್ನ! ಮನದಾ ಗುಟ್ಟು ಬುಡುತೂಂದ್ರೆ ಸರಿ "ಓಗೋ ನಾರಾ ಯಣ! ಆ ಸಂಕಯ್ನೋರ್ನ ಕೇಳಿ ಅಸುಲು ಬಡ್ಡಿ ಎಲ್ಲಾ ಈಸ್‌ತತ್ತಾ. ·ಜರೂರಾಗಿ ಬೇಕಂತೇಂತ ಏಳು. ನಾಯ್ದು ಗೀಯ್ದು ಮಡಗಿದ್ರೆ ಸುಮ್ಕೆ ಕೇಳ್ಕೊಂಡು ಒಂಟು ಬರಬೇಡಾ. ತಗಾದೆಮಾಡು. ಕೊಟ್ಟೋರತು ಮನೆ ಬಾಕಲ್ಬುಟ್ಟು ಕಾಲೆತ್ತಿ ಮಡಗಾಕಿಲ್ಲ ಆಚೇಗೇ ಅಂತೇಳು" ಅಂಗಂತೆಲ್ಲಾ ಏಳಿಕಳಿಸ್ತಾರೆ.

ಬಾಕೀದಾರರ ತಾವ ಓದ್ರೆ "ನೋಡಪ್ಪ, ನಾರಾಯಣಾ! ನಮ್ಗೂ ಬರಬೇಡ್ದ ಕಷ್ಟಾ ಗೋಳ್ಬಂದ್ಬುಟ್ಟವೇ. ಮನೆ ಮಕ್ಕಳೆಲ್ಲಾ ಕಾಯಿಲೆ ಮಲ ಗ್ಬುಟ್ಟವ್ರೆ; ಒಂದೇಡು ಮೂರುವಾರ ಸುದಾರಿಸೂಂತ ಏಳಪ್ಪಾ ನಿಮ್ಮೆಜ ಮಾನ್ರಿಗೆ" ಅಂತ ಕಣ್ಣಾಗೆ ನೀರು ಸುರಿಸ್ತಾರೆ. ಅವರ ಕಷ್ಟ ನೋಡಿ ನಂಗೂ ಅಳೂ ಬಂದ್ಬುಡ್ತೈತೆ ಒಂದೊಂದು ಸಲ. ಅಂಗೂ ಒಂದು ಸಮಯ ಅನ್ನಿ ಸ್ತೈತೆ—ಯಾತಕಾದ್ರೂ ಇಂತೇ ಚಾಕರಿ ನನ್ತಲೆಯಾಗ್ಕಟ್ಟಿದೋಪ್ಪ ದೇವ್ರೇಂತ!

ಬಾಕೀದಾರೀಗೋಳೆಲ್ಲೋರು ಒಳ್ಳೇವ್ರೂಂತ ಏಳಾಕಾಯ್ತದಾ? ಅದ ರಾಗೂ ಏಟೋ ನಮೂನೆ. ಒಬ್ಬೊಬ್ರು ನನ್ನ ತಲೆ ಒಡೆಯೋಕೂ ಇಂಜರಿ ಯಾಕಿಲ್ಲ. ಮತ್ತೆ ಕೆಲವೋರು ನಮ್ಮೆಜಮಾನ್ರನ್ನೇ ಕೂನೀಮಾಡೋಕ್

ಲಡಿಯಾಗಪ್ರೆ. ಬೋ ರಾಮಾಯಣ ! ಬೋ ರಾಮಾಯಣ ! ಈ ಲೇವಾ ದೇವಿ ಕೆಲ್ಸ. ಇಂಗಿವೇ ಪರಪಂಚದಾಗೆ ಕೊಡೋರು ತೆಕ್ಕೊಳ್ಳೋರು ಪಾಡು.

ಅದಿರಲಿ ; ಈ ನಮ್ಮೆಜಮಾನ್ರು ಯಾಕಿಂಗೆ ಸಿಕ್ಕಿ ಸಿಕ್ಕಿದೋರ್ಗೆಲ್ಲ ಸಾಲಕೊಟ್ಟು ಸತಾಯಿಸಿ, ಸತಾಯ್ಸಿ, ನಿಷ್ಠೂರ ಕಟ್ಕೋತಾರೇಂತ ? ಅಂಗೂ ನೋಡೋಕ್ಕೋದ್ರೆ ಇವರಿಗೆ ಎಂಡ್ರಿಲ್ಲ, ಮಕ್ಕಳಿಲ್ಲ. ಇರೋದಿವ್ರೊಬ್ರೇ. ಅಣ, ಅಣ, ಅಣಾಂತ, ಅಣದಾಸೆ ಬೋ ದುರಾಸೇ. ಏನುಮಾಡೋದ್ಕೋ? ಇರೋ ಅಣಾನೇ ಅನುಬೋವ್ಸೋರು ದಿಕ್ಕಿಲ್ಲ. ಇದಿರಾಗೊಂದು ಇಚಿತ್ರ ಬೇರೆ. ಇವರೆಂಡ್ತೀರು ತೀರಿಕೊಂಡು ಏಳೆಂಟು ವರುಸಾ ಆಯ್ತು. ಈಟು ದಿನಾನೂ ಬೇರೆ ನೆಗ್ನ ಆದ್ರೆ ಇಲ್ಲದ ಕರುಸುಗಳೆಲ್ಲಾ ಉಟ್ಕಬುಡ್ತೈತೇಂತ ಏಳ್ತಿದ್ರು. ಅಂಗಿದ್ದೋರ್ಗೆ—ಆವೊತ್ತು ಲಲಿತವ್ವೋವ್ರು ಉಟ್ಟೆದಬ್ಬಕ್ಕೆ ಓಗ್ಬುಟ್ಟು ಬಂದ್ರಲ್ಲಾ—ಆಗ್ನಿಂದ ಮದುವೇ ಆಗಬೇಕೂಂತ ಕಯಾಲಿ ಬೇರೆ ಉಟ್ಬುಟ್ಟೈತೆ. ವಯಸ್ಸು ನೋಡಿದ್ರೆ ಐವತ್ತಕ್ಕೆ ಮೇಲಾಗೈತೆ. ಇದ ರಾಗೆ ಲಲಿತವ್ವೋವ್ರನ್ನೇ ಆಯ್ತಾನೀಂತ ಬೇರೆ. ಅಂತೂ ಸಣ್ಣ ಪ್ರಾಯದ ಉಡುಗೀ ತಲೇಮೇಕ್ಕೊಂದು ಬಂಡೆ ಎಳೆಯಾಕೆ. ಇಂಗದೇ ಪರಪಂಚ ! (ಹೊರಡುವನು.)

[ಪ್ರವೇಶ:—ಪ್ರಭಾಕರ್]

ಪ್ರ:—(ಸ್ವಗತ) ಮುಕುಂದನಿಗೆ ಇಂಥಾಗತಿ ಬರಬಹುದೇ ? ಜಗಜೀವನ ದಾಸರು ಅವನಲ್ಲಿ ವಿಶೇಷ ನಂಬಿಕೆ ವಿಶ್ವಾಸಗಳನ್ನಿಟ್ಟಿದ್ದರು. ಅಂತಹ ಮಾಲೀಕರಿಗೆ ವಿರಸ ಹುಟ್ಟಬೇಕಾದರೆ ಕಾರಣ ? ಮುಕುಂದನ ಪ್ರಾಮಾಣಿಕತೆ ಯಾರಿಗೆ ತಾನೇ ತಿಳಿಯದು ? ಇದನ್ನು ದಾಸರವರೇ ಅನೇಕ ವೇಳೆ ಪ್ರಶಂಸೆಮಾಡಿದ್ದಾರೆ. ಹಾಗಿದ್ದರೂ ಅವನಮೇಲೆ ಅಪರಾಧಹೊತ್ತದ್ದು ಹೇಗೇಂತ ? ಹೌದು; ಮುಕುಂದನ ಹೆಂಡತಿ ಸೀತೆಯು ಆಗಿಂದಾಗ್ಗೆ ಹೇಳುತ್ತಿದ್ದುದು ತಪ್ಪಲ್ಲ. N. J. ದಾಸ್ ಅಂಡ್ ಕಂಪೆನಿಯಲ್ಲಿ ಮುಕುಂದನ ಮ್ಯಾನೇಜರ್ ಪದವಿಯೊಂದರೆ ಯಾರಿಗಾದ್ರೂ ಹೊಟ್ಟೆಕಿಚ್ಚು ಹುಟ್ಟಿಸತಕ್ಕದ್ದೇ. ಅದರಲ್ಲಿಯೂ ಮುಕುಂದನನ್ನು ನೋಡಿ ಹೇರಳವಾಗಿ ಅಸೂಯೆಗೊಂಡವರು

ಇಬ್ಬರು— ಆ ಕಂಪನಿಯ ಹೆಡ್ ಅಕೌಂಟೆಂಟ್ (Head - Accountant) ರಾಮನಾಥ್ ಪಂಡಿತ್—ಅಸಿಸ್ಟೆಂಟ್ ಮ್ಯಾನೇಜರ್(Asst. Manger) ರಘುವೀರಸಿಂಗ್. ಇವರಿಬ್ಬರೂ ಜೂಜುಕೋರರು ! ದುರಾಚಾರಿಗಳು ; ದುಂದುಖರ್ಚಿನವರು. ಎಷ್ಟೋಸಲ ಮುಕುಂದನು ಇವರಿಗೆ ಸಹಾಯಮಾಡಿದ್ದಾನೆ. ಇವರನ್ನು ಅನೇಕ ಆಪತ್ತುಗಳಿಂದ ಬಿಡುಗಡೆ ಮಾಡಿದ್ದಾನೆ. ಇದಕ್ಕಾಗಿ ಮುಕುಂದನು ತನ್ನ ಹೆಂಡತಿ ಮನಸ್ಸಿಗೆ ಬಹಳ ಯಾತನೆಯನ್ನೂ ಸಹ ಉಂಟುಮಾಡಿದ್ದಾನೆ. ಆದರೆ ಈ ಕೃತಘ್ನರಿಗೆ ಅದೆಲ್ಲವೂ ಹೇಗೆ ತಿಳಿಯಬೇಕು? ಇವರಿಬ್ಬರೂ ಘಾತುಕರು ; ನಂಬಿಕೆಗೆ ಅರ್ಹರಲ್ಲ ; ಚಾಡಿಕೋರರು. ಇವರ ವಿಷಯವಾಗಿ ಎಚ್ಚರಿತ್ತು ವರ್ತಿಸಬೇಕೆಂದು ಮುಕುಂದನಿಗೆ ನಾನೂ ಸಹ ಅನೇಕಸಲ ಹೇಳಿದ್ದೇನೆ. ಆದರೆ ಅವನು ಅಷ್ಟಾಗಿ ಗಮನಿಸಲಿಲ್ಲ. ಇದೆಲ್ಲಾ ಮುಕುಂದನ ಗ್ರಹಚಾರವೆಂದೇ ಹೇಳಬೇಕು. ಈ ಸ್ವಾರ್ಥಪರರು ತಮ್ಮ ದರದಿನ ನಿಮಿತ್ತ ಹಣವನ್ನು ದುರುಪಯೋಗ ಪಡಿಸಿ—ಮೋಸದಿಂದ ಆ ಅಪಾದನೆಯನ್ನು ಮುಕುಂದನ ತಲೆಯಮೇಲೆ ಹಾಕಿರಬೇಕು. ಹೇಗೂ ಮುಕುಂದನು ತನ್ನ ಕೆಲಸಕ್ಕೆ ರಾಜೀನಾಮೆಯನ್ನು ಕೊಡಬೇಕಾಗಿ ಬಂತು. ತಲೆಯಮೇಲೆ ಎರಡು ಸಾವಿರ ಬೇರೆ ಹೊರೆ. ಮುಕುಂದನ ಗೌರವಕ್ಕೆ ಚ್ಯುತಿಯನ್ನುಂಟುಮಾಡಿ ಈ ದ್ರೋಹಿಗಳು ಅವನ ಸರಳವಾದ ಬಾಳನ್ನು ನೆಲಕ್ಕೆ ತುಳಿದರು. ಇಂಥಾ ದುರಾಚಾರಿ ಸ್ವಾರ್ಥಪರರು ಯಾವುದಕ್ಕೂ ಹೇಸುವುದಿಲ್ಲ. ಇರಲಿ ; ನಾನೀಗಲೇ ಹೋಗಿ ಮುಕುಂದನನ್ನು ಕಂಡು ಮುಂದಿನ ಪರಿಹಾರವನ್ನು ಕುರಿತು ಆಲೋಚಿಸಬೇಕು. ಮುಕುಂದನು ನಿರಪರಾಧಿ ಎಂಬುದನ್ನು ನಿರೂಪಿಸುವುದಕ್ಕೆ ತಕ್ಕ ತನಿಖೆಯನ್ನೂ ಸಹ ನಡೆಯಿಸಬೇಕು.

(ತೆರೆ ಬೀಳುವುದು. ಪ್ರಭಾಕರನು ಹೊರಡುವನು)



ದೃಶ್ಯ ೩] [ಸ್ಥಾನ: ಮುಕುಂದನ ಮನೆ

[ಪಾತ್ರಗಳು:— ಮುಕುಂದ್, ಸೀತಾ, ಶ್ಯಾಮಲ, ಆನಂದ್,
ಶ್ರೀಧರ್, ಪ್ರಭಾಕರ್, ಅನಂತ್]

[ಮುಕುಂದನು ಚಿಂತಾಕ್ರಾಂತನಾಗಿ ಒಂದು ಸೋಫಾದಲ್ಲಿ ಕುಳಿತಿರುವನು]

[ಪ್ರವೇಶ: ಸೀತಾ]

ಸೀತಾ:—ಏಳೀಂದ್ರೆ ಊಟಕ್ಕೆ !

ಮು:—ಸೀತಾ ! ಈ ವ್ಯಸನದಲ್ಲಿ ನನಗೆ ಊಟವು ಬೇರೆ ಸೇರುತ್ತೆಯೇ ? ಹೇಳು.

ಸೀ:—ನಿಜ, ಏನುಮಾಡೋಣ. ನಮಗೂ ಬರಬಾರದ ಗ್ರಹಚಾರ ಬಂದು ಗಂಟುಬಿತ್ತು. ಹೇಗಾದರೂ ಪ್ರಯತ್ನಪಟ್ಟು ಬಿಡಿಸ್ಕೋಬೇಕು. ಏಳಿ, ಹೋಗಲಿ.

ಮು:—ನನಗೇನೂ ಬೇಕಾಗಿಲ್ಲ ಸೀತಾ ! ಮನಸ್ಸಿಗೆ ಬೇಜಾರು ಬಂದ್ಬಿಟ್ಟಿದೆ.

ಸೀ:—ಏಳೀಂದ್ರೆ, ದೇವರು ಯಾವುದಾದ್ರೂ ಒಂದು ರೀತೀಲಿ ಬಗೆಹರಿಸ್ತಾನೆ.

ಮು:—ಅದು ನಿಜ ; ಆದರೂ ತಕ್ಷಣದಲ್ಲಿ ಮನಸ್ಸಿಗೆ ಹಿಡಿದಿರೋ ಬೇನೇನ್ನ ಹೇಗೆ ಹೋಗಲಾಡಿಸಿಕೊಳ್ಳೋದು ಹೇಳು.

ಸೀ:—ದೇವರನ್ನು ನಂಬೀಂದ್ರೆ. ಯಾವುದಾದ್ರೂ ಪ್ರಯತ್ನಮಾಡಿ. ಎಲ್ಲಾ ಪರಿಣಾಮವೂ ಅವನ ದಯವೊಂದಿದ್ರೆ ನೆಟ್ಟಗಾಗುತ್ತೆ.

[ಪ್ರವೇಶ: ಶ್ಯಾಮಲ]

ಶ್ಯಾ:—ಅಪ್ಪಾ! ಅಪ್ಪಾ! ಆಫೀಸಿಲ್ವೇನಪ್ಪಾ ಇವತ್ತು? ಇದ್ಯಾಕಪ್ಪಾ ಹೊತ್ತಾಗಲಿಲ್ಲವೇ ?

ಮು:—(ಸ್ವಗತ) ಹೂಂ ! ಇನ್ನು ಇವಳಿಗೇನೆಂದು ಹೇಳಲಿ ? (ಪ್ರಕಾಶ) ಶ್ಯಾಮಲಾ ! ನಾನೊಂದು ಆರು ತಿಂಗಳು ರಜತೆಕ್ಕೊಂಡಿದ್ದೇನಮ್ಮಾ!

ಶ್ಯಾ:—ಲಲಿತಕ್ಕನ ಮದುವೆ ಏರ್ಪಾಡು ಮಾಡೋದಕ್ಕೇನಪ್ಪಾ ?

(ಪ್ರವೇಶ: ಆನಂದ್)

**ಆನಂದು:—ಅಪ್ಪ ! ಇವತ್ತು ಸ್ಕೂಲಿನಲ್ಲಿ ಹುಡುಗರು ಕೇಳಿದ್ರು "ನಿಮ್ಮ ಪ್ಪಾವರಿಗೆ ಕೆಲಸ ಹೋಯಿತಂತಲ್ಲಾ" ಅಂತ.**

ಸೀ:—ಲೋ ಆನಂದು! ಅದೆಲ್ಲಾ ದೊಡ್ಡವರ ಮಾತು ನೋಡು, ಸಣ್ಣ ಹುಡುಗರಿಗೆ ಯಾಕೋ ಈ ದೊಡ್ಡಸ್ಥಿಕೆ ಮಾತು?

ಆ:—ಹಾಗಾದರೆ ಸ್ಕೂಲು ಹುಡುಗರು ನನ್ನನ್ನು ಕೇಳಿದ್ರೆ ನಾನೇನು ಮಾಡ ಲಮ್ಮಾ? ಅದೂ ನನ್ನ ತಪ್ಪೆ? ಹೋಗಮ್ಮ, ಎಲ್ಲಾ ತಪ್ಪೂ ನನ್ನ ತಲೆಮೇಲೆ ಹಾಕ್ತೀಯಾ!

ಸೀ:—ಅದಿರಲಿ; ನೀನು ಹೊರಡಪ್ಪಾ ಊಟಕ್ಕೆ.

ಆ:—ನಾನು ಅಪ್ಪಾವರ ಜೊತೇಲ್ಲೇ ಊಟಮಾಡ್ತೇನಮ್ಮಾ.

ಸೀ:—ನೀನು ನಡೆಯೋ ಆನಂದು! ಅವರಿಗೆ ಮೈ ಸರಿಯಾಗಿಲ್ಲ.

ಆ:—ಆಹಹ! ಎಷ್ಟು ಸುಳ್ಳು ಹೇಳ್ತೀಯಮ್ಮಾ? ಅಪ್ಪಾವ್ರು ಎದ್ದು ಓಡಿ ಯಾಡ್ತಾನೇ ಇದ್ದಾರೆ! ಮೈ ಸರಿಯಿಲ್ಲ ಅಂತೀಯಲ್ಲ.

ಮು:—ಹೂಂ! ಈ ಮಕ್ಕಳಿಗೆ ಸುಖದುಃಖಗಳ ಅನುಭವ ಇಷ್ಟೇ. ಆಟ ವಾಡುವ ವಯಸ್ಸು! ಆನಂದನ ಆನಂದವಾದ ಬಾಲಲೀಲೆಗಳು ನನಗೆ ಲಭಿಸುತ್ತವೆಯೇ? (ಪ್ರಕಾಶ) ಲೋ, ಆನಂದು! ನಡೆ ಯೋಪ್ಪ ಊಟಕ್ಕೆ.

ಸೀ:—ನಡೀರೇ, ಲಲಿತಾ! ಶ್ಯಾಮಲಾ! ನಡೀರೇಮ್ಮ ಊಟಕ್ಕೆ!

(ಎಲ್ಲರೂ ಒಳಗೆ ಹೋಗುವರು)

**(ಮುಕುಂದನು ಮಟ್ಟಿಗೆ ಸೋಫಾದಲ್ಲಿ ಕುಳಿತು ಯೋಚಿಸುತ್ತಿರುವನು)**

ಮು:—(ಸ್ವಗತ) ಉದ್ಯೋಗಕ್ಕೆ ರಾಜೀನಾಮೆ ಕೊಡಬೇಕಾಗಿ ಬಂತು. ಅದಕ್ಕೂ ನಾನು ವ್ಯಸನಪಡುವುದಿಲ್ಲ. ಆಫೀಸಿಗೆ ದಂಡಕೊಡಬೇಕಾದ ೨,೦೦೦ ರೂ. ವಿಚಾರವೂ ಒತ್ತಟ್ಟಿಗಿರಲಿ. ನನ್ನ ಪೋಷಕರು! ಹಿತ ಚಿಂತಕರು! ಆಧಾರಭೂತರು! ನಾರಾಯಣಲಾಲ್ ಜಗಜೀವ‌ದಾಸ್ ರವರ ದೃಷ್ಟಿಯಲ್ಲಿ ನಾನು ಅಪ್ರಾಮಾಣಿಕನೆಂದು — ಅದೂ ನನ್ನ ಯಾವ ಅಪರಾಧವೂ ಇಲ್ಲದೆ, ಈ ರಾಮನಾಥ್ ಮತ್ತು ರಘುವೀರ್ ಇವರಿಬ್ಬರ ಕುಟಿಲತರವಾದ ಒಳಸಂಚಿನಿಂದ ನಾನು ಅಪ್ರಾಮಾಣಿಕ ನೆಂದು ಕಂಡುಬಂದುದು—ನನ್ನ ಮನಸ್ಸಿನಲ್ಲಿ ತಡೆಯಲಾರದ ಸಂಕಟ ವನ್ನುಂಟುಮಾಡಿದೆ. ಈ ಅಪವಾದವನ್ನು ಕಳೆದುಕೊಂಡು ಹೇಗೆ

ತಾನೇ ನಾನು ನಿರ್ದೋಷಿಯೆಂದು ನನ್ನ ಮಾಲೀಕರಿಗೆ ನಿರೂಪಿಸಲಿ? ನಾಲ್ಕು ಜನರ ದೃಷ್ಟಿಯಲ್ಲಿ ನಾನೂ ಒಬ್ಬ ಮನುಷ್ಯ ಎಂದು ಹೇಗೆ ತಲೆಯೆತ್ತಿ ತಿರುಗಲಿ ? ಅಯ್ಯೋ, ಗ್ರಹಚಾರವೇ !

( ಪ್ರವೇಶ: ಶ್ರೀಧರ )

ಶ್ರೀ:—ಇದೇನಪ್ಪಾ ಮುಕುಂದ್ ! ನಾನು ಕೇಳಿದ ಆಫೀಸು ಸಮಾಚಾರ ನಿಜವೆ? ನೀನಾಗಿಯೇ ಕೆಲಸವನ್ನು ಬಿಟ್ಟುಬಿಟ್ಟೆಯೋ? ಇಲ್ಲ, ಅವರೇ ಹೋಗೂಂದ್ರೋ?

ಮು:—ಕೂತುಕೋಣ್ಣಾ! ಹೇಗೋ ಒಂದು. ಅಂತೂ ರಾಜೀನಾಮೆ ಕೊಟ್ಟೆ. ಇದರಲ್ಲಿ ನನ್ನ ತಪ್ಪೇನೂ ಇಲ್ಲಾಣ್ಣಾ! ನನ್ನ ತಲೆ ಮೇಲೆ ಅಪರಾಧ ಹೊರಿಸಿ ಅವರಿಬ್ಬರೂ ತಪ್ಪಿಸಿಕೊಂಡ್ರು.

ಶ್ರೀ:—ಯಾರು ? ನಿನ್ನ ಅಸಿಸ್ಟೆಂಟರುಗಳೋ ? ಆ ರಾಮನಾಥ್, ಘರುವೀರ್ ಸಿಂಗ್?

ಮು:—ಹೌದಣ್ಣಾ ! ಮತ್ತೆ ಯಾರು ?

ಶ್ರೀ:—ಎಲ್ಲಾ ಗ್ರಹಚಾರ ನೋಡು ! ನಾನವತ್ತೇ ಹೇಳಬೇಕೂಂತ ಇದ್ದೆ ನಿನಗೆ. ಯಾವುದೋ ಗಲಾಟೆಯಲ್ಲಿ ಮರೆತುಹೋಯಿತು. ಇವರಿಬ್ಬರೂ ಜೂಜಾಟದಲ್ಲಿ ಪ್ರಸಿದ್ಧಿಯಾಯಿತಲ್ಲಪ್ಪಾ ! ಇವರಿಗೆ ಹಣ ಎಷ್ಟು ಬಗೆಯಿಂದ ಬಂದರೂ ಸಾಲದು ಸೋಲೋದಕ್ಕೆ.

ಮು:—ಅಣ್ಣಾ ! ನೀನೇ ಅಂದುಬಿಟ್ಟೆಯಲ್ಲಾ "ಗ್ರಹಚಾರ" ಅಂತ. ಇನ್ಯಾಕಣ್ಣಾ ಅದರ ಮಾತು ? ಅಂತೂ ತಲೇಮೇಲೆ ಹೊರೆ ಏರಿತು.

ಶ್ರೀ:—ಹೊರೆಯೇನು?

ಮು:—ಎರಡುಸಾವಿರ ರೂಪಾಯಿ ದಂಡಬೇರೆ ತೆರಬೇಕಲ್ಲಣ್ಣಾ ಆಫೀಸಿಗೆ. ಅದೂ ಇನ್ನೂ ಐದಾರು ದಿವಸದಲ್ಲೇ! ಏನು ಮಾಡೋದು ? ನನಗಂತೂ ದಿಕ್ಕೇ ತೋರೋದಿಲ್ಲ. ಅಣ್ಣಾ! ಈ ಸಮಯದಲ್ಲಿ ನೀನೇ ಏನಾದ್ರೂ ಸಹಾಯಮಾಡಬೇಕಣ್ಣಾ! ಮೊದಲು ಆ ಆಫೀಸುಹಣದ ತಗಾದೆ ಹರಿಸಿಕೊಂಡು ಬಿಟ್ಟೇಂದ್ರೆ ಆಮೇಲೆ ದೇವರು ಬಿಟ್ಟಂತೆ ಆಗಲಿ.

ಶ್ರೀ:—ಅಲ್ಲವಪ್ಪಾ ಮುಕುಂದ ! ಇದೇ ನೋಡು ತಪ್ಪುತಿಳುವಳಿಕೇ ಅನ್ನೋ ದು. ನಾನೇನು ರಾಶಿಕೂಡಿಹಾಕಿಕೊಂಡಿದ್ದೇನೆಯೋ ಕೊಡೋದಕ್ಕೆ?

ಮು:—ಹಾಗೇಂತ ನಾನು ಹೇಳಿದೆನೇನಣ್ಣಾ ? ಏನಾದ್ರೂಸಮಯಕ್ಕೆ ಸಹಾ ಯಮಾಡೀತೇನೋಂತ? ಮಾನಾಹೋಗೋ ಸಂದರ್ಭ ನೋಡು!

ಶ್ರೀ:—ನಾನು ಮೊದಲೇ ಹೇಳಿದೆ ನಿನಗೆ; ಸಂಪಾದಿಸೋಕಾಲದಲ್ಲಿ ಕೈಸಾ ಗಿದ ಹಾಗೆಲ್ಲಾ ಒಂದಷ್ಟಷ್ಟು ಎತ್ತಿಟ್ಟಿದ್ದರೆ ನೀನೂ ಒಂಬೆಂಟುಹತ್ತು ಸಾವಿರ ಕೂಡಿರಿಟ್ಟಿರಬಹುದಾಗಿತ್ತು. ಅದು ಬಿಟ್ಟು ಸುಮ್ಮನೆ ದುಂದು ಕರ್ಚುಮಾಡಿಬಿಟ್ಟೆ. ಹೇಳಿದಮಾತು ನೀ ಕೇಳಿದರಲ್ಲವೆ ? ಹಾಸಿಗೆ ನೋಡಿ ಕಾಲು ನೀಡಬೇಕೋ ಮುಕುಂದ! ಇಲ್ಲದಿದ್ರೆ ಹೀಗೇ ಕಷ್ಟ ಗಳು ನೋಡು.

ಮು:—ಅದೆಲ್ಲ ಕಳೆದುಹೋದ ಸಮಾಚಾರ. ಈಗ ಬೇಕಾದ್ದು ನಿವಾರಣೆ ! ಈ ಸಮಯದಲ್ಲಿ ನೀನು ಕೈಬಿಟ್ಟುಬಿಡ್ತಿಯೇನಣ್ಣಾ ?

ಶ್ರೀ:—ಅದೇನೋಪ್ಪ! ನಾನೇನೂ ಹೇಳಲಾರೆ. ನನ್ನ ಕಷ್ಟಗಳೂ ತಲೆಗೆ ಮೇಲೆ ಹೋಗ್ಬಿಟ್ಟಿವೆ. ಮನೆ ತುಂಬ ಮಕ್ಕಳು. ಎಲ್ಲಾ ಕಡೆಗ ಳಿಂದಲೂ ಖರ್ಚು. ಇದರಮೇಲೆ ನಿಮ್ಮತ್ತಿಗೇಗೆ ಹೆರಿಗೆ ಕಾಲ. ಬರೋ ವರ್ಷ ನಮ್ಮ ಸರಸೂಗೆ ಬೇರೆ ಮದುವೆ ಮಾಡಬೇಕು. ಇದರಮೇಲೆ ಮನೆ ಕಟ್ಟಿದ ಸಾಲ ಇನ್ನೂ ಮೂರು ತಿಂಗಳಾಗಬೇಕು ತೀರಬೇಕಾದ್ರೆ. ಸಾಲ ಇಲ್ಲ ಅಂತ ಹೆಸರು ಹೇಳ್ಕೋಬೇಕಾದರೆ ನನಗೂ ಒಂದು ಆರು ತಿಂಗಳ ಕಾಲವಾದ್ರೂ ಬೇಕಾಗುತ್ತೆ. ಹೀಗಿದೆ ನೋಡು ನನ್ನ ಕಷ್ಟಗಳು. ನನ್ನಿಂದ ಏನೂ ಸಾಧ್ಯವಾಗೋಹಾಗಿಲ್ಲ.

ಮು:—ಹಾಗೆಂದು ಕೈಬಿಟ್ಟುಬಿಟ್ರೆ ಹೇಗಣ್ಣಾ ? ಈ ಗ್ರಹಚಾರ ಒಂದು ಕಳ ಕೊಂಡರೆ ಆಮೇಲೆ............

ಶ್ರೀ:—ಏನು ಮಾಡೂಂತ ಹೇಳ್ತೀಯೋ ಮುಕುಂದ! ನಾನೆಲ್ಲಾದ್ರೂ ಸಾಲ ಮಾಡೋದಕ್ಕೆ ಹೋದ್ರೆ ಆಮೇಲೆ ನನ್ನ ಕೆಲಸಕ್ಕೇ ಲೋಪ ಬಂದು ಬಿಡುತ್ತೆ. ನಿಮ್ಮ ಜಗಜೀವನದಾಸರನ್ನೇ ಕೇಳು. ಒಂದಾರು ತಿಂಗಳು ಅವಧಿ ಕೊಡೀಂತ. ಏತನ್ಮಧ್ಯೆ ಪ್ರಯತ್ನಪಟ್ಟು ಬೇರೆ ಯಾವು

ದಾದ್ರೂ ಕೆಲಸಕ್ಕೆ ಸೇರಿಕೋ. ಅಷ್ಟಿಷ್ಟು ಸಂಪಾದಿಸು. ಸ್ವಲ್ಪಸ್ವಲ್ಪ ವಾಗಿ ಕೊಡ್ತಾ ಬಾ. ಅವರಿಗೆ ಕೊಡಬೇಕಾದ ದಂಡವೂ ಹರಿದು ಹೋಗುತ್ತೆ. ದಾಸರವರು ತಾನೇ ಏನು ಮಾಡೋ ಹಾಗಿದ್ದಾರೆ? ಬೇಕಾದರೆ ಬಡ್ಡಿ ಸೇರಿಸಿ ಕೊಟ್ಟುಬಿಡು.

ಮುಂ:—ಸರಿಬಿಡಣ್ಣಾ! ದೇವರು ಹೇಗೆ ನಡಿಸ್ತಾನೋ ನಡಿಸಲಿ.

ಶ್ರೀ:—ಇನ್ನು ನಾನು ಹೊರಡ್ತೇನಪ್ಪಾ ಮುಕುಂದ! ಹೊತ್ತಾಯಿತು.

ಮು:—ಹೋಗ್ಬಿಟ್ಟು ಬರ್ತೀರಯೇನಣ್ಣಾ?

ಶ್ರೀ:—ಹಾಂ! ನೋಡಿದೆಯಾ; ದಿನಾ ಮರೆತುಹೋಗುತ್ತೆ. ಆ ಪೆಟ್ರೋಲು ಟ್ಯಾಂಕಿನವನು ಕಂಡಾಗಲೆಲ್ಲಾ ಕೇಳ್ತಾ ಇದ್ದಾನೆ. ಅವಂದೊಂದು ೨೭ರೂ. ಬಾಕಿ ನಿಂತುಹೋಗಿದೇಂತ. ಅದನ್ನು ಕೊಟ್ಟುಬಿಡಬಾರದೇ? ನನ್ನ ತಗಾದೇ ಮಾಡ್ತಾ ಇದ್ದಾನೆ ಅವನು "ನೀವು ಹೇಳಿ, ನೀವು ಹೇಳಿ" ಅಂತ.

ಮು:—ಯಾವುದಣ್ಣಾ ಅದು? ನನ್ನ ಬಾಕಿಯೆಲ್ಲಾ ಕೊಟ್ಟುಬಿಟ್ಟೆನಲ್ಲಾ?

ಶ್ರೀ:—ಅದೇಪ್ಪಾ! ನಮ್ಮ ಕಾರಿನಲ್ಲಿ ಪಾಂಡೀಚೆರೀಗೆ ಹೋಗಲಿಲ್ಲವೇ ನಾನೂ ನೀನೂ ಎಲ್ಲಾ? ಆಗ ಹಾಕಿಸಿದ ಪೆಟ್ರೋಲು!

ಮು:—ಓಹೋ! ಅದನ್ನು ನನ್ನ ಲೆಕ್ಕಕ್ಕೆ ಬರೆದಿದ್ದಾನೋ? ಆಗಲೀಣ್ಣಾ, ನೋಡೋಣ.

ಶ್ರೀ:—ಈಗ ಇದ್ದರೆ ಕೊಟ್ಟುಬಿಡು, ತೆಕ್ಕೊಂಡುಹೋಗಿ ತಲಪಿಸಿ ಬಿಡ್ತೇನೆ.

ಮು:—ಎಲ್ಲಿಂದ ತರಲೀಣ್ಣಾ? ಅದೂ ಈ ಸಂದರ್ಭದಲ್ಲಿ?

ಶ್ರೀ:—ಸರೀ ನಾನು ಹೊರಡ್ತೇನೆ. (ಶ್ರೀಧರನು ಹೊರಡುವನು)

(ಪ್ರವೇಶ: ಸೀತಾ)

ಸೀ:—ಏನು ಹೇಳಿದ್ರೂಂದ್ರೆ ಅವರು?

ಮು:—ಯಾರು ಸೀತಾ?

ಸೀ:—ಯಾರು? ನಿಮ್ಮ ಅಣ್ಣಂದಿರು!

ಮು:—ಅನ್ನುವುದೇನು? "ನೀನು ನನ್ನ ಮಾತು ಕೇಳಲಿಲ್ಲ. ಅದರಿಂದ ಕೆಟ್ಟೆ" ಅಂತಂದ.

ಸೀ:—ಅಷ್ಟು ಹೊತ್ತು ಮಾತಾಡಿದ್ದೂ ಇಷ್ಟೇನೇ? ಆದ್ರೆ ಕೊನೇಲಿ ಇತ್ಯರ್ಥ?

ಮು:—ತನ್ನ ತಾಪತ್ರಯವೆಲ್ಲಾ ಹೇಳ್ಕೊಂಡ ಅಷ್ಟೆ!

ಸೀ:—ಇಷ್ಟೇ. ಹೋಗಲಿ ಬಿಡಿ. ನಾನು ಕೇಳಿದ್ರೆ ನಿಮಗೆ ಹೇಳೋದಕ್ಕೆ ಬೇಕಾಗುತ್ತೆಯೋ?

ಮು:—ಇದ್ಯಾಕೆ ಸೀತಾ! ನನ್ನ ಯಾಕೆ ಹೀಗೆ ಕಾಡ್ತಾ ಇದ್ದೀಯೆ ಹೇಳಿ? ನನ್ನ ಕಷ್ಟಕ್ಕೆ ಏನು ಮಾಡಲೀಪ್ಪಾ ದೇವ್ರೇ!" ಅಂತ ನಾನಲೀತಾ ಇದ್ರೆ. 'ಅವರೇನು ಹೇಳಿದ್ರು? ಅವರೇನು ಹೇಳಿದ್ರು?' ಅಂತ ಪೀಡಿಸ್ತಾ ಇದ್ದೀಯಲ್ಲ, ನಿನಗೇನು ತಿಳೀದೇನೋ ಪಾಪ!

ಸೀ:—ತಿಳಿದಿದ್ರೆ ನಿಮ್ಮನ್ನು ಕೇಳಬೇಕಾಗಿತ್ತೇನೋ? ಹೋಗಲಿಬಿಡಿ.

ಮು:—ಕೋಪ ಯಾತಕ್ಕೆ ಸೀತಾ? ಅಣ್ಣ ಅಂದ 'ನಾನು ಸುಂಕದವನು; ನನ್ನ ಹತ್ತರ ಸುಖದುಃಖ ಎಲ್ಲಾ ಹೇಳ್ಕೋತಾ ಇದ್ದೀಯಲ್ಲಾಂ'ತ.

ಸೀ:—ಹಾಗೇಂತ ಯಾರಾದ್ರೂ ಹೇಳ್ತಾರೆಯೇಂದ್ರೆ?

ಮು:—ಆ ತಾತ್ಪರ್ಯ ಬರೋಹಾಗೆ ಹೇಳಿದ ಅನ್ನು.

ಸೀ:—ಸರಿ, ನಾನು ಸ್ವಲ್ಪ ಒಳಗೆ ಹೋಗಿ ಬರ್ತೇನೆ. ಸ್ನಾನಮಾಡಿ ಏಳಿ. (ಎಂದುಕೊಂಡು ಸೀತೆಯು ಒಳಗೆ ಹೋಗುವಳು. ಮುಕುಂದನು ಚಿಂತಾಕ್ರಾಂತನಾಗಿ ಸೋಫಾದಲ್ಲಿ ಒರಗುವನು. ಆಯಾಸಪೀಡಿತ ನಾದ ಅವನಿಗೆ ನಿದ್ರೆ ಹಿಡಿಯುವುದು)

[ಪ್ರವೇಶ: ಪ್ರಭಾಕರ ಮತ್ತು ಅನಂತ]

ಪ್ರ:—(ಮುಕುಂದನನ್ನು ನೋಡಿ) [ಸ್ವಗತ] ಹೂಂ! ಎಷ್ಟು ವಿದ್ಯೆ ಇದ್ದ ರೇನು? ಎಷ್ಟುಬುದ್ಧಿ ಇದ್ದರೇನು? ಎಷ್ಟುಸಾಮರ್ಥ್ಯವಿದ್ದರೇನು? ಗ್ರಹಚಾರವು ಪ್ರಬಲವಾಗಿ ಮೇಲಿಂದಮೇಲೆ ಅನಿರೀಕ್ಷಿತವಾಗಿ ಕಷ್ಟ ಗಳು ಪ್ರಾಪ್ತವಾಗುತ್ತಿದ್ದರೆ ಎಂತಹ ಸಾಹಸಿಯಾದರೂ ಸತ್ವಹೀನ ನಾಗತಕ್ಕುದ್ದೇ ಅಲ್ಲವೆ?

ಅ:—ಪ್ರಭಾಕರ್! ಅಣ್ಣನು ಆಯಾಸದಿಂದ ಮಲಗಿದ್ದಾನೆ. ಸ್ವಲ್ಪ ಒಳಗೆ ಹೋಗಿ ಬರೋಣ ನಡಿ. (ಇಬ್ಬರೂ ಒಳಗೆ ಹೋಗುವರು).

(ಅನಂತರ ಮತ್ತೆ ಪ್ರವೇಶಿಸಿ)

ಅಣ್ಣಾ ! ಅಣ್ಣಾ ! (ಎಂದು ಮುಕುಂದನನ್ನು ಅನಂತನು ತಟ್ಟಿ ಎಬ್ಬಿಸುವನು)

ಮು:—(ದಿಗ್ಭ್ರಮೆಯಿಂದ ಎದ್ದು) ಅನಂತ್ ! ನೀನು ಬಂದು ಎಷ್ಟು ಹೊತ್ತಾಯಿತು ?

ಅ:—ಇದೇನಣ್ಣಾ ಇಷ್ಟು ಹೊತ್ತಿನಲ್ಲಿ ನಿದ್ರೆ ? ಊಟವಾಯಿತೇನಣ್ಣಾ ?

ಮು:—ನೀವಿಬ್ಬರೂ ಇಲ್ಲಿಗೆ ಬಂದು ಎಷ್ಟು ಹೊತ್ತಾಯಿತು ? ಪ್ರಭಾಕರ್! ಇದೇನಪ್ಪಾ ? ಈ ದಿನ ಗುಂಟೂರಿಗೆ ಹೋಗಿ ಬರುತ್ತೇನೆಂದು ಹೇಳಿದ್ದೆಯಲ್ಲಾ ? ಏನು ಕಾರಣ ಹೋಗಲಿಲ್ಲ ?

ಪ್ರ:—ಮುಕುಂದ್ ! ಇಲ್ಲ; ಹೋಗಲಿಲ್ಲ. ಯಾವುದೋ ಬೇರೊಂದು ಕಾರಣದಿಂದ ನಿಂತುಬಿಟ್ಟೆ. ಏಳು; ಊಟಮಾಡು. ಆಮೇಲೆ ಒಂದೆರಡು ಮಾತಾಡೋಣ.

ಮು:—ಏನು ಊಟವೋ ಬಿಡಪ್ಪ. ಮೈಕೈಕಾಲೆಲ್ಲಾ ಸೋತು ಹೋಯಿತು. ರಾತ್ರಿಯೆಲ್ಲಾ ನಿದ್ರೆಯಿಲ್ಲ. ಕೂತಿದ್ದ ಹಾಗೆಯೇ ಆಯಾಸದಿಂದ ನಿದ್ರೆ ಹತ್ತಿತು. ಅದಿರಲಿ. ನೀವಿಬ್ಬರೂ ಬಂದು ಬಹಳ ಹೊತ್ತಾಯಿತೇನು ?

ಪ್ರ:—ಇಲ್ಲ, ಇಲ್ಲ ; ಇದೇತಾನೆ ಬಂದೆವು. ಅದಿರಲಿ. ನೀನೇಳಪ್ಪ ಊಟಕ್ಕೆ.

ಮು:—ಪ್ರಭಾಕರ್ ! ನಿನಗೆ ತಿಳಿಯದೆ ಇಲ್ಲ. ನನ್ನ ಮನಸ್ಸಿನ ಈ ವಿಷಮಪರಿಸ್ಥಿತಿಯಲ್ಲಿ ನಿದ್ರಾಹಾರಗಳಮೇಲೆ ಅಪೇಕ್ಷೆ ಹುಟ್ಟುತ್ತದೆಯೇ ? ಹೇಳು. ಇರಲಿ, ಕೇಳಬೇಕೆಂದಿರುವುದನ್ನು ಕೇಳು. (ಅನಂತನನ್ನು ನೋಡಿ) ಕೂತುಕೋಪ್ಪ ಅನಂತ್ !

ಪ್ರ:—ನೀನು ಕೆಲಸಕ್ಕೆ ರಾಜಿನಾಮೆಯನ್ನಿತ್ತುದು ನಿಜವೆ ? ಯಾತಕ್ಕೆ ಹೀಗೆ ದುಡುಕಿದೆ ?

ಅ:—ಅಂತಹ ಅವಸರವೇನಣ್ಣಾ ಬಂದದ್ದು ?

ಮು:—ಕೇಳಿ. ಹಿಂದೆ ಅನೇಕಾವರ್ತಿ ಈ ರಾಮನಾಥ ಪಂಡಿತ್ ಮತ್ತು ರಘುವೀರಸಿಂಗ್........ಇವರ ಬಗ್ಗೆ........

ಪ್ರ:—ಇವರಿಬ್ಬರೂ ಜೂಜುಕೋರರು; ಅದರಲ್ಲಿಯೂ ಪ್ರಸಿದ್ಧಿಯಾದವರು. ಕೇವಲ ದುರಾಚಾರಿಗಳು.

ಅ:—ಅದು ಗೊತ್ತಾದ ವಿಷಯ ತಾನೇ ! ಆಮೇಲೆ ?

ಮು:—ಇವರಿಬ್ಬರೂ ಮೊದಮೊದಲು ಬಹಳ ಸಭ್ಯರ ಹಾಗೇ ನಟಿಸಿದರು. ಇವರ ವಿಷಯವಾಗಿ ಸೀತೆಯೂ ನನ್ನನ್ನು ಎಷ್ಟೋ ಸಲ ಎಚ್ಚರಿಸಿದ್ದಳು.

ಪ್ರ:—ನಾನೂ ಸಹ ಅನೇಕವೇಳೆ ನಿನಗೆ ಹೇಳಿರಲಿಲ್ಲವೆ ?

ಮು:—ಅಹುದು ; ಆದರೆ ಗ್ರಹಚಾರ ! ನಾನು ಆ ಎಚ್ಚರಿಕೆಯನ್ನು ಗಮನಿಸಲಿಲ್ಲ. ಮೊನ್ನೆಮೊನ್ನೆ ನನ್ನ ರುಜು ನಿಶಿ ಯಾವುದೋ ಹಣವನ್ನು ದುರುಪಯೋಗಪಡಿಸಿ ನನ್ನ ತಲೆಗೆ ತಂದರು. ನನ್ನಲ್ಲಿ ವಿಶೇಷ ಪ್ರೀತಿ ವಿಶ್ವಾಸಗಳನ್ನಿಟ್ಟಿದ್ದ ದಾಸ್‌ರವರ ಮನಸ್ಸಿನಲ್ಲಿ ವೈಷಮ್ಯವನ್ನು ಹುಟ್ಟಿಸಿದರು. ಇವರ ಮೋಸಕೃತ್ಯದಿಂದ ನಡೆದ ಅಪಹಾರಕ್ಕೆ ನಾನು ಗುರಿಯಾದೆ. ಎರಡು ಸಾವಿರ ರೂಪಾಯಿ ಅಪಹೃತ ಧನವನ್ನು ನಾನೇ ಸಲ್ಲಿಸಬೇಕೆಂದು ದಾಸ್‌ರವರು ತೀರ್ಮಾನಿಸಿದರು. ಆ ತೀರ್ಮಾನಕ್ಕೆ ನಾನು ಬದ್ಧನಾದೆ. ಆದರೆ ಸೂಕ್ತವಾದ ಸಾಕ್ಷ್ಯಗಳು ಮಾಲೀಕರಿಗೆ ದೊರಕದೆ ಇದ್ದುದರಿಂದಲೋ ಏನೋ ಅವರು ನನ್ನನ್ನು ಕೆಲಸದಿಂದ ತೆಗೆದುಹಾಕುವುದಕ್ಕೆ ಪ್ರತಿಯಾಗಿ ನಾನೇ ರಾಜೀನಾಮೆಯನ್ನು ಕೊಡಬೇಕೆಂದು ಸಲಹೆಯನ್ನಿತ್ತರು. ದಾಸರವರು ಆದ್ಯಂತ ನನ್ನ ಹಿತಚಿಂತಕರು. ಧಾರಾಳಹೃದಯರು. ಎಂದಾದರೊಂದು ದಿನ ನನ್ನ ಪ್ರಾಮಾಣಿಕತೆಯ ಬಗ್ಗೆ ಅವರಿಗೆ ತಕ್ಕ ಸಾಕ್ಷ್ಯಗಳು ದೊರೆಯದೆ ಇರುವುದಿಲ್ಲ. ಅಂದು ಅವರು ನನ್ನನ್ನು ಸನ್ಮಾನಿಸುವರು. ಉದಾರತ್ವದಿಂದ ಮನ್ನಿಸಿ ಪೋಷಿಸುವರು. ಇದರ ವಿಷಯವಾಗಿ ನನಗೊಂದು ದೃಢನಂಬಿಕೆಯುಂಟು. ತತ್ಕಾಲದಲ್ಲಿ ಮಟ್ಟಿಗೆ ಗ್ರಹಚಾರ ವಶಾತ್ತಾಗಿ ನಾನು ಕಷ್ಟಗಳನ್ನು ಅನುಭವಿಸಬೇಕು. ನನ್ನ ಮಾತನ್ನು ನೀವಿಬ್ಬರೂ ನಂಬುವಿರೋ ಅಥವಾ ಸಂಶಯಾಸ್ಪದವೆಂದು ಬಿಡುವಿರೋ ?

ಪ್ರ:—ನಿನ್ನ ಸಂದೇಹವನ್ನು ಬಿಡು ಮುಕುಂದ್ !

ಅ:—ಅಣ್ಣಾ ! ಯಾರು ಯಾವ ತೆರನಾಗಿಯಾದರೂ ಭಾವಿಸಲಿ. ಅದರ ಸಲುವಾಗಿ ನೀನು ಚಿಂತಿಸಬೇಡವಣ್ಣಾ ! ನಿನ್ನ ಪ್ರಾಮಾಣಿಕತೆಯೇ ನಿನ್ನನ್ನು ಕಾಯುವುದು. ಇದರಲ್ಲಿ ಲೇಶಮಾತ್ರವೂ ಸಂದೇಹವಿಲ್ಲ.

ಮು:—ಅಹುದಪ್ಪ ಅನಂತ್ ! ಆದರೆ ಈ ದಂಡ — ಎರಡು ಸಾವಿರ ರೂಪಾಯಿ ! ಇದನ್ನೆಲ್ಲಿಂದ ತರಲಿ ? ಯಾರ ಕಾಲನ್ನು ಕಟ್ಟಿ ಒದಗಿಸಲಿ ?

ಪ್ರ:—ಅದೇ ಮುಖ್ಯವಾಗಿ ಆಲೋಚಿಸತಕ್ಕ ವಿಷಯ. ನಾನಂತೂ ಕೇವಲ ನಿರ್ಗತಿಕ. ಆ ವಿಷಯವನ್ನು ನೀನೂ ಬಲ್ಲೆ. ಈ ಸಂದರ್ಭದಲ್ಲಿ ಏನು ಮಾಡುವುದು ?

ಅ:—ನನ್ನ ಪಾಡಂತೂ ಹೇಳಲೇ ಕೆಲಸವಿಲ್ಲಣ್ಣಾ ! ಚಿಕ್ಕಪ್ಪನಿಗೆ ೮,೦೦೦ ರೂಪಾಯಿಗೆ ಜಾಮೀನಾಗಿ ಬಿಟ್ಟಿದ್ದೇನೆ. ಆತನಂತೂ ತೀರಿಸೋ ಹಾಗಿಲ್ಲ. ಸಾಲಮಟ್ಟಿಗೆ ನನ್ನೂ ಬಿಟ್ಟಿದ್ದಲ್ಲ. ನಾನೂ ಅವಸ್ಥೆಪಡುತ್ತಿದ್ದೇನೆ.

ಪ್ರ:—ಮುಕುಂದ್ ! ಈ ವೇಳೆಗೆ ನೀನೇ ಏನಾದರೂ ಆಲೋಚನೆ ಮಾಡಿರುವೆಯಾ ?

ಮು:—ಏನು ಯೋಚನೆ ಮಾಡಲಪ್ಪಾ ? ನನಗಂತೂ ಬುದ್ಧಿಯೇ ಓಡಲಿಲ್ಲ. ಮೇಲೆ ಆಕಾಶ ; ಕೆಳಗೆ ಪಾತಾಳ ; ಸುತ್ತಲೂ ಸಮುದ್ರ ! ಪ್ರಕೃತ ಇಷ್ಟೇ ನನ್ನ ಕಣ್ಣಿಗೆ ಕಾಣುವುದು.

ಅ:—ಶ್ರೀಧರಣ್ಣನ್ನ ಕೇಳಿ ನೋಡಿದರೋ ?

ಮು:—ನಿನಗೊಂದು ಭ್ರಮೆ ! ತಿಳಿದೂ ತಿಳಿದೂ ಹೀಗೆ ಹೇಳ್ತಿದ್ದೀಯಲ್ಲ ಮೋಪ್ಪಾ !

ಪ್ರ:—ಇದರಲ್ಲೇನ್ನು ನಾಚಿಕೆ ಮುಕುಂದ್ ? ಸಮಯದಲ್ಲಿ ಹೇಗಾದರೂ ಅನುಸರಿಸಬೇಕು. ಕೇಳೋದಂತೂ ಕೇಳೋದು; ಹಾಗೂ ಇಲ್ಲಾಂದ್ರೆ ಆಮೇಲೆ ನೋಡೋಣ.

ಮು:—ಹೂಂ ! ಅದೂ ಆಯಿತಪ್ಪ !

ಅ:—ಹೋಗಿ ಕೇಳಿದೆಯೇನು ?

ಮು:—ಇಲ್ಲ, ಇಲ್ಲೇ ಬಂದಿದ್ದ ಅವನು.

ಅ:—ಏನೆಂದ ?

ಮು:—ಅನ್ನೋದೇನು ? ''ನಾನು ಮೊದಲೇ ಹೇಳಿದೆ. ನೀನು ಕೇಳಲಿಲ್ಲ. ಹಾಸಿಗೆ ನೋಡಿ ಕಾಲು ನೀಡಬೇಕು. ಸುಮ್ಮನೆ ದುಂದು ಖರ್ಚು ಮಾಡಿದರೆ ಹೀಗೇ ಕಷ್ಟ. ಹಾಗೆ ಹೀಗೆ ಅಂತ ಏನೇನೋ ಹೇಳ್ಬಿಟ್ಟು ನಡೆದ. ಅದನ್ನು ನೆಚ್ಚಿಕೊಂಡು ಪ್ರಯೋಜನವಿಲ್ಲ. ಸಮಯಕ್ಕೆ ಒದಗದ ಮಾತು ಅದೆಲ್ಲಾ.

ಪ್ರ:—ಹಾಗಾದರೆ ಆ ಪಾಂಡುರಂಗನನ್ನೇ ಆಶ್ರಯಿಸಿದರೋ ?

ಅ:—ಹೌದು. ಆತ ಹೇಗಿದ್ದರೂ ಲೇವಾದೇವಿ ವ್ಯಾಪಾರದಲ್ಲಿರತಕ್ಕವನು. ಮೇಲ್ಪಟ್ಟ ಬಂಧು. ಆತನನ್ನೇ ಕೇಳಬೇಕು.

ಮು:—ಇದೊಂದು ಭ್ರಮೆ !

ಪ್ರ:—ನೀನು ಚಿಂತಿಸಬೇಡಾಯ್ಯಾ ಮುಕುಂದ್ ! ನಾವಿಬ್ಬರೂ ಮೊದಲು ಹೋಗಿ ಆತನಲ್ಲಿ ಪ್ರಸ್ತಾಪಮಾಡಿಬಿಟ್ಟು ಬರ್ತೇವೆ. ನೀನು ಊಟ ಮಾಡಿಬಿಟ್ಟು ಸ್ವಲ್ಪಹೊತ್ತು ವಿಶ್ರಮಿಸಿಕೋ. ಸುಮ್ಮನೆ ಯೋಚನೆ ಮಾಡಿ ತಲೆ ಕೆಡಿಸ್ಕೋ ಬೇಡ.

(ಹೊರಡುವರು)

[ಪ್ರವೇಶ: ಸೀತಾ]

ಸೀ:—(ಮುಕುಂದನನ್ನು ಕುರಿತು) ಏಳೀಂದ್ರೆ ! ದೇವರನ್ನು ನಂಬಿ. ಯಾವುದಾದರೂ ಒಂದು ರೀತಿಯಲ್ಲಿ ಸರಿಹೋಗುತ್ತೆ. ಯಾಕೆ ಸುಮ್ಮನೆ ಯೋಚನೆ? ಹುಟ್ಟಿಸಿದ ದೇವರು ಹುಲ್ಲು ಮೇಯಿಸ್ತಾನೆಯೇ ? ಹೀಗೇ ಪರೀಕ್ಷೆಮಾಡ್ತಾನೆ, ಮಾಡಲಿ. ಅಂತೂ ಎಲ್ಲಾ ಅವನ ಸಂಕಲ್ಪ ಅನುಸರಿಸಿಯೇ ನಡೀತ್ತೆ. ನಮ್ಮ ಕೈಲೇನಿದೆ? ಅವನ್ನ ನಂಬಿ ಕೈಲಾದ ಪ್ರಯತ್ನ ಮಾಡಬೇಕಷ್ಟೆ. ಅಂದಹಾಗೆ ನಿಮಗೆಷ್ಟೋ ಬ್ಯಾಂಕಿನ ಮ್ಯಾನೇಜರುಗಳೆಲ್ಲಾ ಪರಿಚಯವಿದೆಯಲ್ಲಾ ; ಯಾರನ್ನಾದರೂ

ಒಂದು ಸ್ವಲ್ಪಕಾಲಕ್ಕೆ ಸಾಲಕೊಡೀಂತ ಕೇಳಿ. ಸಮಯದಲ್ಲಿ ಅಷ್ಟೂ ಸಹಾಯ ಮಾಡಲಾರರೇ ?

ಮು:—ಸೀತಾ ! ಇನ್ನಾ ಕಾಲವು ಸ್ವಪ್ನದಲ್ಲಿ ಕಲೆತುಹೋಯಿತು. ಉದ್ಯೋಗ ವಿರುವವರೆಗೆ ಆ ದಾಕ್ಷಿಣ್ಯವೆಲ್ಲ? ಉದ್ಯೋಗದಿಂದ ನಿವೃತ್ತನಾದ ಮೇಲೆ ನನ್ನನ್ನು ಯಾರು ಲಕ್ಷ್ಯಮಾಡ್ತಾರೆ? ಈಗೇನಿದ್ದರೂ ಕೊಟ್ಟ ಸಾಲ ತಿರುಗಿಸಿ ಕೊಡೊಂತ ಎಲ್ಲರೂ ಕೇಳ್ಳೋವರೇ ಹೊರತು ಹೊಸ ದಾಗಿ ನನಗೆ ಸಾಲಕೊಡೋದಕ್ಕೆ ಯಾರೂ ಸಿದ್ಧರಾಗಿಲ್ಲ. ಉದ್ಯೋಗ ಹೀನರ ನಿರಾಧಾರ, ಸಹಾಯಶೂನ್ಯತೆ, ಎಲ್ಲಾ ಈಗಲೀಗ ನನಗೆ ಸ್ಪಷ್ಟ ವಾಗಿ ತಿಳಿಯಲಾರಂಭಿಸಿತು. ಅಂತೂ ಈಗ ಬರಬಾರದ ಕಷ್ಟಗಳು ಬಂದ್ಬಿಟ್ಟವೆ. ಇವುಗಳಿಂದ ನನ್ನನ್ನು ಹೇಗೆ ಪಾರುಮಾಡ್ತಾನೋ ದೇವರು ನೋಡಬೇಕಾಗಿದೆ.

ಸೀ:—ನಿಮ್ಮದೊಂದು ೧೦,೦೦೦ರೂ. ಇನ್ಷ್ಯೂರೆನ್ಸು ಪಾಲಿಸಿ ಇತ್ತಲ್ಲಾ; ಅದರ ಮೇಲೆ ಸಾಲ ತೆಗೆದು ಈ ಆಫೀಸು ಹಣ ತೀರಿಸಿ ಬಿಡೋದು ತಾನೆ ?

ಮು:—ಈ ತಾಪತ್ರಯಗಳಲ್ಲಿ ಅದೂ ಲ್ಯಾಪ್ಸ್ (Lapse) ಆಗಿ ಕೂತಿದೆ. ಈಗ ೭೫೦/ರೂಪಾಯಿ ಪ್ರೀಮಿಯಂ (Premium) ಪಾವತಿ ಮಾಡಿ ದರೆ ಪಾಲಿಸಿ (Policy) ಜಾರಿಗೆ (Revival) ತರಬಹುದು.

ಸೀ:—ಪ್ರೀಮಿಯಂ ಪಾವತಿಯಾಗದೇ ಇದ್ದುದಕ್ಕೆ ಕಾರಣ ?

ಮು:—ಜಂಟಿಸಾಲಗಳ ಹೊರೆ. ಅವುಗಳನ್ನು ತೀರಿಸಿ ತೀರಿಸಿ — ನಾನೂ ಸೋತುಹೋದೆ. ಈಮಧ್ಯೆ ೭೫೦/–ಎಲ್ಲಿಂದ ತರೋದು ?

ಸೀ:—ಸರಿ, ಬಿಡಿ. ನಾನವತ್ತೇ ಹೇಳಿಬಿಟ್ಟೆನಲ್ಲಾ. ನಮಗೂ ಏನೋ ಗ್ರಹ ಚಾರ ಒಕ್ಕರಿಸಿ ಬಿಟ್ಟಿದೇಂತ. ಅಂತೂ ನನ್ನ ನೀವು ಕೈಹಿಡಿದ ವೇಳೆಯೂ ಚೆನ್ನಾಗಿಲ್ಲ ಮುಖ್ಯವಾಗಿ. ಹೂಂ ! ದೇವರೇ ಕಾಪಾಡಲಿ.

ಮು:—ಹೋಗಲಿ ಬಿಡು ಸೀತಾ ! ಈಗ್ಯಾಕದರ ಮಾತು ? ಈಗ ಬಂದಿರೋ ಕಷ್ಟದಿಂದ ಹೇಗೆ ಪಾರಾಗಲಿ ? ಯಾರ ಕಾಲಿಗೆ ಬೀಳಲಿ ? ಸೀತಾ !

ನನಗಂತೂ ದಿಗ್ಭ್ರಮೆ ಹಿಡಿದ ಹಾಗಾಗಿದೆ. ಸೇವಿಂಗ್ಸ್ ಬ್ಯಾಂಕ್ (Savings Bank) ಸಲ್ಲಿದ್ದ ಒಂದ್ಕೆನೂರು ರೂಪಾಯನ್ನೂ ತೆಗೆದು ಆ ದಿನ ಜಂಟಿ ಸಾಲಕ್ಕೆ ತೆತ್ತುಬಿಟ್ಟೆ.

ಸೀ:—ಯಾವುದಾದ್ರೂ ಸಮಯ ಸಂದರ್ಭಕ್ಕೇಂತ ಒಂದ್ಯೆವತ್ತು ರೂಪಾಯಿ ಎತ್ತಿಟ್ಟಿದ್ದೇನೆ. ಅದರಿಂದ ಏನು ಕಷ್ಟ ಹರೀತ್ತೆ? ಹೇಳಿ. ಇದ್ದ ಚಿನ್ನ ಬೆಳ್ಳಿ, ಎಲ್ಲಾ ಅವತ್ತೇ ಮಾರಿಹಾಕಿಯಾಯ್ತು. ಇನ್ನೇನಿದೆ ಹೇಳಿ ಎತ್ತಿಕೊಡೋದಕ್ಕೆ? ನನ್ನನ್ನು ಹೆತ್ತವರೂ ನಡೆದುಬಿಟ್ರು ಭೂಲೋಕದಿಂದ. ಅತ್ತಕ್ಕಡೆಯೂ ಜನಗಳಿಲ್ಲ. ಇತ್ತಕ್ಕಡೆಯೂ ಜನಗಳಿಲ್ಲ. ಯಾರನ್ನು ಕೇಳೋದು?

ಮು:—ಸರಿ, ಇಲ್ಲದೇ ಇರೋದನ್ನು ಎಲ್ಲಿಂದ ತರೋದು?

ಸೀ:—ಪಾಂಡುರಂಗರಾಯರನ್ನು ಕೇಳಬೇಕೂಂತ ಹೇಳ್ತಿದ್ರಲ್ಲ ನಿಮ್ಮ ತಮ್ಮಂದಿರು?

ಮು:—ಅದು ನಿಜ. ಆದರೆ, ಸೀತಾ! ಅದೊಂದು ಭ್ರಮೆ!

ಸೀ:—ಯಾತಕ್ಕೆ? ಅವರಲ್ಲಿ ಹಣವಿಲ್ಲವೆ? ಅಥವಾ ನಿಮಗೆ ಕೊಡೋದಕ್ಕೆ ಇಷ್ಟವಿಲ್ಲವೆ?

ಮು:—ಹಣವಿದೆ. ಆದರೆ ನಮ್ಮ ಗ್ರಹಚಾರಕ್ಕೆ ಯಾರ ಯಾರ ಮನಸ್ಸು ಯಾವ ಯಾವ ರೀತಿ ಬದಲಾಯಿಸುತ್ತೋ ಕಂಡವರಾರು?

ಸೀ:—ಹಾಗಾದರೆ ಮುಂದೇನುಗತಿ?

ಮು:—ಮುಂದೇನುಗತಿ ಎನ್ನುವಿಯೋ? ಹಿಂದೆ ಸಲಹಿದ ಒಡೆಯನೇ ಮುಂದೆಯೂ ಸಲಹಬೇಕು. ಸೀತಾ! ಈ ವಿಷಮಪರಿಸ್ಥಿತಿಯಲ್ಲಿ ನನಗಾವ ಯೋಚನೆಯೂ ಹೊಳೆಯುವುದಿಲ್ಲ. ನನ್ನನ್ನು ಈ ಕಷ್ಟದಿಂದ ಪಾರುಮಾಡಲು ಶಕ್ತಿಯುಳ್ಳವನೆಂದರೆ ಆ ಪಾಂಡುರಂಗನೊಬ್ಬನೆ! ನನ್ನ ಕರ್ಮವೋ ದಿನೇ ದಿನೇ ಪ್ರಬಲವಾಗುತ್ತಿದೆ. ನನ್ನ ಕಷ್ಟಗಳು ಕ್ಷಣ ಕ್ಷಣಕ್ಕೂ ಪ್ರಚಂಡವಾಗಿ ಪರಿಣಮಿಸುತ್ತಲಿವೆ. ಈ ಕಷ್ಟಗಳಿಂದ ಪಾರುಗಾಣಿಸೆಂದು ಆ ಪಾಂಡುರಂಗನನನ್ನೇ ಶರಣುಹೋಗಬೇಕು.

ದೃಶ್ಯ ೪]                    [ಸ್ಥಾನ: ಪಾರ್ಕು (ವಿಹಾರಸ್ಥಳ)

[ ಪಾತ್ರಗಳು: ರಾಮನಾಥ್ ಪಂಡಿತ್ ಮತ್ತು ರಘುವೀರಸಿಂಗ್ ]

ರಾ:—ಅಂತೂ ನಮ್ಮ ಕೆಲಸವು ಕೈಗೂಡಿದ ಹಾಗೆಯೇ.

ರಘು:—ಆದೂ ದಾಸ್‌ರವರಿಗೆ ಅನುಮಾನ ಹುಟ್ಟಿದೆಯೇ !

ರಾ:—ಅನುಮಾನ ಹುಟ್ಟುವುದಕ್ಕೆ ಕಾರಣ? ನಾವು ಮಾಡಿದ ಯುಕ್ತಿ ಸಾಮಾನ್ಯವಾದದ್ದೇ ?

ರಘು:—ದಾಸ್‌ರವರು ಮ್ಯಾನೇಜರ್ ಮುಕುಂದರಾಯರನ್ನು ಕರೆದು ಸ್ಪಷ್ಟವಾಗಿ ಹೇಳಿದರಂತಲ್ಲಾ. "ಈ ಅಪಹಾರವು ನಿನ್ನಿಂದಲೇ ನಡೆದಿದೆ. ನಿನ್ನ ಬಿನ್ನಹ (Memorial) ವನ್ನು ನಾನು ಗಮನಿಸಬೇಕಾದ ಆವಶ್ಯಕತೆ ಇಲ್ಲ. ನಿನ್ನ ಮೇಲೆ ಕ್ರಿಮಿನಲ್ ಪ್ರೋಸೀಡಿಂಗ್ಸ್ (Criminal Proceedings) ನಡೆಸಬಹುದು. ಆದರೂ ನಿನ್ನ ಸರ್ವಿಸ್ (Service) ಅನ್ನು ಗಮನಿಸಿ ಮನ್ನಿಸಿದ್ದೇನೆ. ಅಪಹೃತವಾದ ೨,೦೦೦ ರೂಪಾಯಿಗಳನ್ನು ಇನ್ನೆಂಟು ದಿವಸಗಳಲ್ಲಿ ಪಾವತಿ ಮಾಡದಿದ್ದಲ್ಲಿ ಪರಿಣಾಮವು ಕಷ್ಟವಾದೀತು. ಎಚ್ಚರಿಕೆ" ಎಂದು. ಅಂತೂ ಈ ಛಪಾವಣೆಯನ್ನು ನಡೆಯಿಸಿ, ಮುಕುಂದನ ಮೇಲೆ ತಳ್ಳಿ ನಾವು ಪಾರಾದುದು ನಮ್ಮ ಅದೃಷ್ಟವೇ ಸರಿ.

ರಾ:—ಈಗ ಹೊಸದಾಗಿ ನೇಮಕವಾದ ಮ್ಯಾನೇಜರಿ (Manager) ಗಂತೂ ಏನೇನೂ ತಿಳಿಯದು. ಮಂಕನೆಂದರೆ ಶುದ್ಧ ಮಂಕ !

ರಘು:—ಆದೊಂದು ಭಾಗದಲ್ಲಿ ನಮಗನುಕೂಲವೇ !

ರಾ:—ಅಲ್ಲವೆ ಮತ್ತೆ ?

ರಘು:—ಸರಿ, ಮುಕುಂದನಿಗಾದ ಗತಿಯೇ ಇವನಿಗೂ.

ರಾ:—ಆದೇನೋಪ್ಪ ! ಮೊನ್ನೆ ಸಸ್‌ಪೆನ್ಸ್ (Suspense Account) ಅಕೌಂಟಿನಲ್ಲಿ ಹಾಕಿರುವ ೩,೦೦೦ರೂ. ತಕ್ಷಣ ಸರಿಪಡಿಸಬೇಕು. ಇನ್ನೊಂದು ವಾರದೊಳಗೆ ದಾಸ್‌ರವರು ಬೊಂಬಾಯಿಯಿಂದ ಬಂದುಬಿಡುತ್ತಾರೆ. ಆ ವೇಳೆಗೆ ಹಣ ಭರ್ತಿ ಮಾಡಬೇಕು.

ರಘು:—ನಾವಿಬ್ಬರೂ ಒಂದಾಗಿರುವವರೆಗೂ ಯಾವ ಭಯವೂ ಇಲ್ಲ.

ರಾ:—ಅಂದಹಾಗೆ ಕೊಲ್ಹಾಪುರದ ರೇಸೆಸ್ (Races) ರಿಸಲ್ಟ್ (Result) ನಾಳೆ ತಿಳಿಯುತ್ತೆ ಅಲ್ಲವೆ?

ರಘು:—ಯಾತಕ್ಕೆ? ಇವತ್ತು ಸಂಜೇಗೇ ರೆಡಿ (Ready).

ರಾ:—ಹೇಗೋ ಈ ಸಸ್‌ಪೆನ್ಸು (Suspense) ಮೊದಲು ಸರಿಪಡಿಸಬೇಕು.

ರಘು:—ನಿನ್ನೆ ಪರೇಲ್ ಆಟದಲ್ಲಿ ಎಷ್ಟು ಆದಾಯ?

ರಾ:—ಅಯ್ಯೋ, ಅದೊಂದು ಹೊಟ್ಟೆಕಿಚ್ಚು!

ರಘು:—ಯಾಕಯ್ಯಾ? ಏನೂ ಪ್ರಯೋಜನವಾಗಲಿಲ್ಲವೆ?

ರಾ:—ಆರುನೂರು ಕೊಚ್ಚಿಕೊಂಡು ಹೋಯಿತು.

ರಘು:—ಹಾಗಾದರೆ ಸಸ್‌ಪೆನ್ಸ್ ಅಕೌಂಟ್ ಸರಿಪಡಿಸಿದ ಹಾಗಾಯಿತು. ಸರಿಯಾಗಿ ೧೨ ಡಜನ್ (dozen) ಷ್ಯಾಂಪೇನ್ ಬರೋದಲ್ಲಯ್ಯಾ ನೀನು ಸೋತ ಹಣಕ್ಕೆ? ಹೋಗಲಿ, ರಾತ್ರಿ ಆ ಎಂಗೇಜ್‌ಮೆಂಟ್ (Engagement) ಮರೆತೇಂತ ಕಾಣುತ್ತೆ.

ರಾ:—ಯಾವ ಎಂಗೇಜ್‌ಮೆಂಟ್? (Engagement)

ರಘು:—ಆ ಸೋನಾಬಾಯಿ!

ರಾ:—Wine, Women and Race! ಇವುಗಳಲ್ಲಿ ಯಾವುದನ್ನು ಮರೆಯೋದಿಕ್ಕಾಗುತ್ತೆ? ಹೇಳು. ನಡಿ ಹೋಗೋಣ.



ದೃಶ್ಯ ೫] [ಸ್ಥಾನ : ಪಾಂಡುರಂಗನ ಮನೆ

(ಬ್ಯಾಂಕಿಂಗ್ ಆಫೀಸು ಕೊಠಡಿ)

[ಪಾತ್ರಗಳು :—ಪಾಂಡುರಂಗ್, ಮುಕುಂದ್, ಪ್ರಭಾಕರ್, ಅನಂತ್ ಮತ್ತು ನಾರಾಯಣ ]

ಪಾಂ:—(ಸ್ವಗತ) ಆ ದಿನ ಲಲಿತೇನ್ನ ನೋಡಿದ ಮೇಲೆ ನನ್ನ ಮನಸ್ಸಿನ ಪರಿಸ್ಥಿತಿಯೇ ಬದಲಾಯಿಸಿ ಹೋಯಿತಲ್ಲಾ! ಅಲ್ಲಾ, ಇದೇನಿರ ಬಹುದೊಂತ! ನನ್ನ ವಯಸ್ಸು ಐವತ್ತುಮೂರಕ್ಕೆ ಬಿತ್ತು. ಹೆಂಡತಿ ಸತ್ತುಹೋಗಿ ಎಂಟು ವರ್ಷಗಳಾಯ್ತು. ಇಷ್ಟು ದಿವಸವೂ ಮದ್ವೆ ಬೇಡಾ ಬೇಡಾ ಅಂತಲೇ ಇದ್ದೆ. ಇದ್ದಕ್ಕಿದ್ದ ಹಾಗೆ ಚಪಲ ಹುಟ್ಟಿ ತಲ್ಲಾ! ಕಾರಣ? ಅಲ್ಲ, ಇದನ್ನೇ ಅಲ್ಲವೇ ಮಾಯಾಜಾಲ ಅಂತ ನ್ನೋದು? ಅದಿರಲಿ. ಲಲಿತೇಗೆ ೧೪ನೇ ವಯಸ್ಸು. ಅವಳ ತಾತನಿ ಗಾಗೋ ವಯಸ್ಸಾಗಿದೆ ನನಗೆ! ಆದರೆ ನನ್ನ ಮನಸ್ಸು ಹೀಗೆ ಸಡಿಲವಾ ಗಬಹುದೇಂತ? ಹೂಂ! ಹೆಂಡತೀನ್ನ ಕಳಕೊಂಡು ಎಷ್ಟು ಕಾಲಾಂತ ಹೀಗೆ ಒದ್ದಾಡೋದು? ಅದು ಸರಿ. ಇನ್ನೊಂದು ವಿಷಯ! ಒಂದು ಸಮಯ ಈಗ ನಾನು ಮದುವೆಮಾಡ್ಕೋತೀನಿ ಅಂತಂದ್ರೆ, ಚೆನ್ನಾಗಿ ರುತ್ತೆಯೇಂತ? ನಾಲ್ಕು ಜನರು ನನ್ನೋಡಿ ನಗೋಲ್ವೆ? ಹಾಂ! ಏನುಮಾಡಲಿ? ಮನಸ್ಸಿಗಂತೂ ಹೇಳೋಕಾಗೋಲ್ಲ, ಅಷ್ಟು ಚಪಲ ಹಿಡಿದು ಬಿಟ್ಟಿದೆ. ಅದೂ ಲಲಿತೇನ್ನೇ ಮದುವೇ ಮಾಡ್ಕೋಬೇ ಕೊಂತ! ಇದಕ್ಕೇನು ಮಾಡಲೀ? ಲಲಿತೆ ಒಪ್ಪುತ್ತಾಳೆಯೇ? ಮುಕುಂದ ಸಮ್ಮತಿಸ್ತಾನೆಯೇ? ಹಾಂ! ಇರಲಿ. ಇನ್ನೇನು ಸಾಲ ಕೇಳೋದಕ್ಕೆ ಮುಕುಂದ ಇಷ್ಟರಲ್ಲಿ ಇಲ್ಲಿಗೆ ಬಂದೇ ಬರ್ತಾನೆ. ಮೊದಲು ನಾನೂ ಸ್ವಲ್ಪ ಹೆಣಗಾಡಿಸ್ತೇನೆ. ಆಮೇಲೆ 'ಹಣ ನೀವು ಕೊಟ್ಟೇತೀರಬೇಕೂಂ'ತ ಮುಕುಂದ ಹೇಳಿದಾಗ, ಲಲಿತೇನ್ನ ಕೊಟ್ಟು ಮದುವೇ ಮಾಡಿದ್ರೇನೇ ಆಗಬಹುದೂಂತ ಖಂಡಿತವಾಗಿ ಹೇಳ್ಬಿ ಡ್ತೇನೆ. ಇದರಲ್ಲೇನಂತೆ ನಾಚಿಕೆ? ಅವನಿಗೆ ಹೆಣ್ಣು ದೊಡ್ಡದಾದರೆ ನನಗೆ ಹಣ ದೊಡ್ಡದು; ಇರಲಿ; ಈಗ್ಯಾಕದರ ಮಾತು?

[ಪ್ರವೇಶ: ಪ್ರಭಾಕರ್, ಅನಂತ್ ಮತ್ತು ಮುಕುಂದ್]

ಮು:—ನಮಸ್ಕಾರ, ಪಾಂಡುರಂಗರಾಯರೇ!

ಪಾಂ:—ಓಹೋ, ಬನ್ನೀಂದ್ರೆ. ಅಂತೂ ನಮ್ಮ ಮನೇಗೆ ತಾವು ಬರೋದೇ ಅಪರೂಪ! (ನಾರಾಯಣನನ್ನು ಕರೆಯುವನು) ಲೋ ನಾರಾಯಣ! ನಾರಾಯಣಾ! ಅವನೆಲ್ಲಿರ್ತಾನೆ? ಅವನು ಮಟ್ಟಿಗೆ ಸಮಯಕ್ಕೊದಗೋದಿಲ್ಲ ನೋಡಿ. ಸುಮ್ಮನೆ ಹೆಸರಿಗೆ ಮಟ್ಟಿಗೆ ಆಳೂಂತ! ಹೂಂ! ಹದಿನಾಲ್ಕು ರೂಪಾಯಿ ಸಂಬಳ! ನೆಟ್ಟಗೆ ಮೂರುಕಾಸು ಬಾಕಿ ವಸೂಲಿಮಾಡಿಕೊಂಡು ಬರೋದಿಲ್ಲ. ಕರೆದ ವೇಳೇಲ್ಲಿ ಇಲ್ಲಿರೋದೂ ಇಲ್ಲ. ನಾನೇನು ಮಾಡ್ಲಿ ಇವನ್ನ ಕಟ್ಟಿಕೊಂಡು? ನನ್ನ ಬಾಳು ಹೀಗೇಂತ ಹೇಳೋದಿಕ್ಕಾಗೋದಿಲ್ಲ ನೋಡಿ. ಬಹು ಪೇಚಾಟ! ಬಹು ಪೇಚಾಟ!

ಮು:—ಏನು ಸ್ವಾಮಿ! ಅಂಥಾ ಕಷ್ಟ ತಮಗೆ? ದೇವರು ಕೊಟ್ಟ ಹಾಗೆ ಬೇಕಾದಷ್ಟಿದೆ. ಸುಖವಾಗಿರಬಹುದಲ್ಲಾ. ಅದರಲ್ಲಿಯೂ ಹೆಂಡತಿಯೇ? ಮಕ್ಕಳೇ? ಸಾಲವೇ? ಸೋಲವೆ? ತಾವು ಪೇಚಾಡೋದಕ್ಕೆ?

ಪಾಂ:—ಹಾಂ! ಅದೇ ನೋಡಿ. ಮನೇಲ್ಲಿ ಹೆಂಡತೀ ಮಕ್ಕಳೂಂತಿದ್ರೆ ಇಷ್ಟೊಂದು ಪರದಾಟ ಯಾತಕ್ಕೆ ಸ್ವಾಮಿ ನನಗೇ? ಎಲ್ಲಾದಕ್ಕೂ ಆಳು, ಆಳೂಂತ ನನ್ನ ಬಾಳು ಹಾಳು. ಹೀಗೆ ಎಷ್ಟು ದಿವಸಾಂತ ಕಳಿಯೋದು ಕಾಲಾನ್ನ? ಮನೇಲಿ ಹೆಂಗಸೂಂತ ಇದ್ರೆ ಏನೋ ಹೊತ್ತು ಹೊತ್ತಿಗೆ ಅಷ್ಟು ಊಟ, ಉಪಚಾರ........ಇಲ್ಲದೆ ಇದ್ರೆ ನನ್ನ ಕೇಳೋವರು ತಾನೇ ಯಾರು ಸ್ವಾಮಿ?

(ಪ್ರವೇಶ: ನಾರಾಯಣ)

ನಾ:—ಬುದ್ಧಿ! ಬಡ್ಡಿ ಅಣಗೋಳ್ ಯಾವುದೂ ವಸೂಲಾಗ್ನಿಲ್ಲ.

ಪಾಂ:—ಆಗೋಲ್ಲಾಂತ ಗೊತ್ತಾದ ವಿಷಯವೇ? ಹೀಗೇ ಮಾಡ್ತಾಯಿರು; ಈ ತಿಂಗಳು ಸಂಬಳ ತಕೋತೀಯಂತೆ ಚೆನ್ನಾಗಿ. ಮುಟ್ಠಾಳ!

ನಾ:—ಕೊಡೋವ್ರು ಕೊಡ್ಡಿದ್ರೆ ಅದ್ಕೆ ನಾನೇನು ಮಾಡಾಕಾಯ್ತದೆ ಬುದ್ಧಿ?

ಪಾಂ:—ಹೇಳಿದ್ದು ಕೇಳ್ಕೊಂಡು ನೆಟ್ಟಗೆ ಇಲ್ಲಿ ಬಂದು ಅತ್ತುಬಿಡು. ಎಲ್ಲಾ ನೆಟ್ಟಗಾಗುತ್ತೆ. ಅಲ್ಲಿಗೆ ನನ್ನ ಹೊಟ್ಟೇನೂ ತುಂಬಿದ ಹಾಗೆಯೇ ಲೆಖ್ಖ.

ನಾ:—ಇನ್ಮೇಕ್ಕಾರಾ ಸಾಲಾ ಕೊಡೋವಾಗ ಒಸಿ ಕಂಡಿಸನ್ ಸರಿಯಾಗಿ ಬರೇಸ್ಕೊಳ್ಳಿ ಬುದ್ಧಿ! ಇಂಗಾದ್ರೆ ಕೊಡ್ತೀನಿ; ಇಲ್ದಿದ್ರೆ ಆಗೋಕಿಲ್ಲಾಂತ ದೃಢವಾಗಿ ಏಳ್ಬುಡಿ. ಅದರಾಗೇನಂತ ದಾಕ್ಸಿಣ್ಯ?

ಪಾಂ:—ಅದಿರಲೋ. ಬೆಳಿಗ್ಗೆ ಹೋದವನು ಈಗ ಬರ್ತಾ ಇದ್ದೀಯಲ್ಲಾ? ಏನುಮಾಡ್ತಿದ್ದೇ ಇಷ್ಟೊತ್ತೂಂತ?

ನಾ:—ಬುದ್ಧಿ! ತಾವು ಕೊಟ್ರಲ್ಲಾ ಕಾಜಗಾಗೋಳು-ಅವ್ನೆಲ್ಲಾ ಆ ಲಾಯರೀಗೋಳ್ತಾವ ಕೊಟ್ಬಂದೀವ್ನಿ.

ಪಾಂ:—ಅವರೇನಂದ್ರೋ ಅದಕ್ಕೆ?

ನಾ:—ಅವರಿದ್ಕೊಂಡು "ನೀನು ನಡೆಯೋ ನಾರಾಯಣ! ನಾ ಎಲ್ಲಾ ನೋಡಿ ಮಡಗ್ತೀನಿ ಇರಾಮುವಾಗಿ; ಓಗಿ ಎಜಮಾನ್ರಿಗೇಳು" ಅಂತಂದ್ರು ಬುದ್ಧಿ!

ಪಾಂ:—ಆಮೇಲೆ? ಬಾಕೀ ವಸೂಲೀ ಏನೂ ಆಗಲಿಲ್ಲಾಂತ ಮೊದಲೇ ಹೇಳಿಬಿಟ್ಟೆ. ಅದೆಲ್ಲೆಲ್ಲಿ ಅಲೀತಾ ಇದ್ದೀಯೋ? ಅಂತೂ ಈಗ ಬಂದೆ-ವರದಿ ಒಪ್ಪಿಸೋಕೆ!

ನಾ:—ಅಂಗಾರೆ ನಾನು ಬಾಕಿ ವಸೂಲೀಗೆ ಓಗನಿಲ್ಲವ್ರಾ?

ಪಾಂ:—ಹೋಗಿದ್ದೆ—ಆದ ವಸೂಲಿ?

ನಾ:—ವಸೂಲಿ ಆಗನಿಲ್ಲ ಬುದ್ಧಿ! ಆ ಚಿನ್ನಪ್ಪ ಮನೆಯಾಗಿಲ್ಲ. ಆ ಎಂಕಟೇಸಪ್ಪನವರು ಅದೆಲ್ಲೋ ಪೇಟೇಕಡೇ ಓಗವ್ರಂತೆ! ಆ ತಿಮ್ಮಯ್ಯ ಆಸ್ಪತ್ರೆಗೋಗವ್ನಂತೆ—ಅವನೆಂಡ್ರು ಕಾಯಿಲೆ ಆಗವ್ಳಲ್ಲಾ ನೋಡು ಬುಟ್ಟು ಬರಾಕೆ. ಆ ಸಂಕರಯ್ಯನೋರು ಬುದ್ಧಿ! ತಮ್‌ತಾಕೇ ಒಂಟ್ ಬಂದ್ರಂತೆ. ಅವರು ಬಂದಿದ್ರಾ ಬುದ್ಧಿ? ಬಡ್ಡಿ, ಅಸುಲೂ, ಎಲ್ಲಾ ತಂದು ಒಪ್ಪುಸುಬುಟ್ರಾ?

ಪಾಂ:—ಹೋಗೋ ದಡ್ಡಮುಂಡೇದೇ! ಇಲ್ಲಿ ತಂದೊಪ್ಪಿಸ್ತಾನೇ ಅವನು? ಹೂಂ! ಆಮೇಲೆ ಓದಿಬಿಡು ನಿನ್ನ ಪುರಾಣಾನ್ನಾ! ನಾನೂ ಕೇಳಿ ಸಂತೋಷಪಟ್ಟುಬಿಡ್ತೇನೆ.

ನಾ:—ಅದೇ ಬುದ್ಧಿ! ಆ ಸಂಕರಯ್ನೋರು ನಿಮ್ಹಾತ್ಕೇ ಒಂಟುಬಂದ್ರು ಅಂತ ಅವರ ಮಕ್ಕಳಂದ್ರು. ಆ ಕೇಸವಪ್ನೋರು ಬೊಂಬಾಯಿಗೋ ಗವ್ರಂತೆ. ಬರೋಕೊಂದು ತಿಂಗಳಾಯ್ತುದಂತೆ. ಆ ಮಾದೇವ ಪ್ನೋರು ಬುದ್ಧಿ! ಅವರ ಮನೇತಾಕ್ಕೂ ಓಗಿದ್ದೆ. ತಾವೇಳ್ದಂಗೆ 'ಬಡ್ಡಿ, ಅಸುಲೂ, ಕೊಟ್ಬುಡಬೇಕು. ಇಲ್ದಿದ್ರೆ ದಾವಾ ಊಡುಬು ಡ್ತಾರಂತೆ ಅಂತ ಏಳಾಕೆ. ಅವರ ಮನೇ ಬಾಕಿಲಾಗೆ ಆ ಬದ್ರಯ್ಯ ನೋರು ಕುಂತಿದ್ರು.

ಪಾಂ:—ಯಾವ ಬದ್ರಯ್ಯನೋ ಅದು? ಈ ಹಾಳು ಹೆಸರುಗಳೆಲ್ಲಾ ಈ ವಯಸ್ಸಿನಲ್ಲಿ ಯಾರಿಗೆ ಜ್ಞಾಪಕ ಇರುತ್ತೇಂತ?

ನಾ:—ಅದ್ಯಾಕಾ ಬುದ್ಧಿ! ತಮಗ್ಗೊತ್ತಿಲ್ಲವ್ರಾ? ಆ ಮಾದೇವಪ್ನೋರ ಭಾವಮೈದ - ಆ ರೆಟ್ಟೇಗಾತ್ರದ ವಿಾಸೆ ಅಯ್ತುಲ್ಲಾ, ಅವ್ರು ಬುದ್ಧಿ!

ಪಾಂ:—ರೆಟ್ಟೆಗಾತ್ರವೋ! ಹೊಟ್ಟೆಗಾತ್ರವೋ? ಹೂಂ! ಆಮೇಲೆ?

ನಾ:—ಬಾಕಿಲಾಗೆ ಕುಂತಿದ್ರಲ್ಲಾ ಕೇಳಿದೆ. ಅವರವ್ರು ಬುದ್ಧೀ ಮನೆ ಯಾಗೆ? ಅಂತ. ಇಲ್ಲಾಂತಂದ್ರು. ಅಷ್ಟರಾಗೆ ಅಲ್ಲೊಂದು ಮೊಗ ಕುಂತಿತ್ತು. 'ಅವರವ್ರೆ, ಒಳಕ್ಕುಂತವ್ರೆ,' ಅಂತು. ಕಳ್ಳ ಸಿಕ್ಕ ಅಂತ ಮನಸ್ಸನಾಗಂದುಕೊಂಡದ್ದೆ 'ಇದೇನ್ಬುದ್ಧಿ! ಇಂಗೂ ಸುಳ್ಳು ಏಳ್ಬೋದಾ? ನಾನು ಬುದ್ಧಿ! ಸಾವುಕಾರ ಪಾಂಡುರಂಗಪ್ನೋರು ಆಳು. ಬಾಕಿ ವಸೂಲೀಗೆ ಬಂದೀವ್ನಿ, ಓಗಿ ಕರೀರಿ ಬುದ್ಧಿ ಅವರನ್ನಾ; ಅಂತೇಳ್ದೆ. ಅದಕವರಿದ್ದುಕೊಂಡು "ಅವರು ಕೆಲಸವಾಗವ್ರೆ ಒರಕ್ಕೆ ಬರೋಂಗಿಲ್ಲ, ಒಂಟೋಯ್ತಾ ಇರು. ಸಾವುಕಾರ್ರು ಆಳಾದ್ರೆ ಒಳ್ಳೇ ಕೆಲಸ ಆಯ್ತು" ಅಂದ್ರು.

ಪಾಂ:—ಸರಿ. ಅದನ್ನು ಕೇಳ್ಕೊಂಡು ಬಂದುಬಿಟ್ಟೆಯೋ ಇಲ್ಲವೋ?

ನಾ:—ಅದ್ಯಾಕಾ ಬುದ್ಧಿ! ಅದ್ಯಾಕಾ ಬುದ್ಧಿ, ಬುಟ್‌ಬುಡ್ತೀನಾ ಅಂಗಾರೆ ಅವರ್‍ನಾ? ಅಂಗೂಕೇಳ್ದೆ, 'ಅದೇನ್ಬುದ್ಧಿ, ಅಣಾ ತೆಕ್ಕೊಳ್ಳೋವಾಗ ಓಟೊಂದು ತಿರುಗಿದ್ರಲ್ಲಾ ನಮ್ಮಜಮಾನ್ರತಾವಾ ಆ ಮಾದೇವ ಪ್ನೋರು! ಬಾಕಿ ಸುಸ್ತಿಯಾಗ್ಯತೆ ಈಗ. ಕೇಳಾಕ್ಬಂದ್ರೆ ಒಳಾಕ್ಕಿದ್ದು ಕೊಂಡೇ ಇಲ್ಲಾಂತಾ ಏಳಿಸ್ಬುಡೋದಾ? ಬರೇಳಿ ಒರಾಕ್ಕೆ. ಅದೇ ನೇಳ್ತಾರೋ ಏಳ್ಬುಡ್ಲಿ. ಅಂಗೂ ಬೇಕಾರೆ ನಮ್ಮಜನೂನ್ರತಾವಾ ಬಂದೇಳ್ಲಿ. ಇಲ್ದಿದ್ರೆ ದಾವಾ ಊಡ್ಬುಡ್ತಾರೇ. ಇಗೊಳ್ಳಿ; ಲಾಯರಿ ತಾಕ್ಕೇ ಓಯ್ತಿದ್ದೀನಿ, ಅಂತ ಕಾಜಗಾಗೋಳೂ ತೋರಿಸ್ದೆ.

ಪಾಂ:—ಅದಕ್ಕವರೇನಂದ್ರೋ?

ನಾ:—ಆಯಪ್ಪ ಅಂದದ್ದು ಕೇಳ್ತಿದ್ದೀಯರ್ಾ? ಅವನಂದ 'ನಿಂಗೇನೋಗಾ ಚಾರಾ ಒಕ್ಕರಿಸ್ಬುಟ್ಟೈತೆ. ಎಚ್ಚು ಮಾತಾಡಿದ್ರೆ ಸೊಂಟ ಮುರಿ ದಾಕ್ಬುಡ್ತೀನಿ—ಉಸಾರ್!" ಅಂತಂದ. ಆಗಲಿ, ಮುಂದಕ್ ತಿಳೀತೈತೆ; ಈಗ್ಯಾಕದರಮಾತು? ಅಂತ ನಾನಂದೆ ಬುದ್ಧಿ! ಇದೆಂತೇಗಾ ಚಾರ ನೋಡಿ ಬುದ್ಧಿ! ತವ್ ಬಾಕಿ ವಸೂಲಿ ಮಾಡೋಕೋಗಿ ಆಮೇಕಿಂದ ಅಂಗೂ ಒಂದು ಪಕ್ಸ ತಲೆಬುಲ್ಡ್ ಒಡ್ಡಾಕೋದ್ಕೊ ಇಂಜರಿಯೋಕಿಲ್ಲ ಒಸಿ ಜನ ಬಾಕೀ ದಾರೀಗೊಳು! ಈ ಸಾಲ ಕೊಡೋದು ಒಸಿ ಬಂದ್‌ಮಾಡಿ ಬುದ್ಧಿ! ಅಣಮನೆಯಾಗಿದ್ರೆ ಉಳುತೋಯ್ತದಾ? ಈಗ ಕೊಟ್ಟೆರೋ ಅಣಾಗೋಳು ವಾಪಸ್ಸು ಬಂದ್ರೇನೇ ಎಷ್ಟೋ ಆಯ್ತದೇ.

ಪಾಂ:—ಹೋಗೋ ಕೈಲಾಗದ ಹೆಣವೇ! ಮುಟ್ಠಾಳ! ಮನೆಮಕ್ಕಳಿಲ್ಲಾಂದ್ರೆ ಸುಮ್ಮನೆ ಕೇಳ್ಕೊಂಡು ಹೊರಟು ಬಂದೆಯೋನೋ? ಒಳಗೆ ಹೋಗಿ ನೋಡಬೇಕಾಗಿತ್ತು. ಇಲ್ಲದಿದ್ರೆ ಹೊರಗಡೆ ಕಾಯ್ಕೊಂಡಿರಬೇಕು. ಹೊರಗೋಗಿದ್ರೆ ಒಳಗೆ ಬರೋದೇ ಇಲ್ಲವೆ ಆದ್ರೆ. ಒಳಗಿದ್ರೆ ಹೊರಗೆ ಬರೋದಿಲ್ವೆ? ಅದರಲ್ಲೂ ದಿನಾ ಒಂದೇ ಹೊತ್ತಿಗೆ ಹೋದರೆ ಅವರೂ ಸುಳಿವು ತಿಳುಕೋತಾರೆ. ಸ್ವಲ್ಪ ಹೊತ್ತು ಬದಲಾಯಿಸ್ಕೊಳ್ಳೊ! ಅದು ಬಿಟ್ಟು ಯಾರೋ ಮನೆಮಕ್ಕಳು ಇಲ್ಲಾಂ

ತಂದ್ರೆ ಕೇಳ್ಕೊಂಡು ಹೊರಟು ಬರೋದಕ್ಕಾ ನಿನಗೆ ಸಂಬಳಾಂತ ಕೊಟ್ಟಿಟ್ಟಿರೋದು ?

ನಾ:—ಅಂಗೂ ತಾವೇಳೋಂಗೇ ನೊನ್ನೆ ಆ ಶ್ಯಾಮರಾಯರ ಮನೆಯಾಗೆ ಬಾಕಿಲಾಗೇ ಕಾಯ್ಕೊಂಡು ಕುಂತಿದ್ದೆ. ಏನು ಸುಕವಿಲ್ಲ ಬುಡಿ. ಒರಗು ಕುಂತಿದ್ದವನು ನಾನು ಒರಗೇ ಆದೆ. ಒಳಗಿದ್ದೋರು ಇತ್ತಲಬಾಕ್ಲಾಗ್ಲಿಂದ ಕಡದೊಂಟೇ ಓದ್ರು. ನಂಗೂಟ ತಪ್ಪೋದ್ದೇ ಲಾಭ. ಇದೊಂದು ಗಾಸಾರ ಬುದ್ಧಿ ! ಅನ್ಕೊಂಡು ಸಾಯೋದು.

ಪಾಂ:—ಥೂ ! ಮುಟ್ಠಾಳ ! ನಿನಗೆ ಮೀಸ ಬೇರೆ ಕೇಡೇನೋ ? ನೀನು ಮಾಡೋ ದಿವ್ಯವಾದ ಬಾಕೀ ವಸೂಲೀಗೇ ? ನಂ ಎಲ್ಲಾ ನೆಟ್ಟಿಗಾಯ್ತು ಈಗ.

ನಾ:—ಬುದ್ಧಿ ! ಇನ್ನೇಕೊಂದು ಕೆಲಸಮಾಡ್ಬೇಕು ಬುದ್ಧಿ !

ಪಾ:—ಏನೋ ಅದು ?

ನಾ:—ಬುದ್ಧಿ ! ಇನ್ನೊಂದು ಆಳು ಸಾಂಕ್ಷನ್ (Sanction) ಮಾಡಿ ಬುದ್ಧಿ !

ಪಾಂ:—ನಿಮ್ಮ ತಾತ ಗಂಟುಕಟ್ಟಿದ್ದಾನೆ ಇಲ್ಲಿ ಇನ್ನೊಂದು ಆಳಿಗೆ ಕೊಡೋಕೆ ?

ನಾ:—ಅಲ್ಲ ಬುದ್ಧಿ ! ಏಡಾಳಿದ್ರೆ ಇತ್ತಲ ಬಾಕ್ಲಿಗೊಂದು, ಒರ ಬಾಕ್ಲಿಗೊಂದು ಆಳಾಯ್ತು. ಆಗ ಬಾಕೀದಾರೀಗೋಳು ಯಾರೂ ತಪ್ಪಿಸಿಕೊಂಡೋ ಅಂಗಿಲ್ಲ.

ಪಾಂ:—ಆಯ್ತು, ಹಾಗೇ ಮಾಡೋಣ ಇರಲಿ. ಆ ಅಡಿಗೆ ಕಿಟ್ಟಪ್ಪ ಯಾಕ್ ಬರಲಿಲ್ಲ ನೋಡಿಕೊಂಡು ಬಾ.

ನಾ:—ಆಗಲಿ ಬುದ್ಧಿ !

ಪಾಂ:—(ಮೂವರನ್ನೂ ನೋಡಿ) ಕ್ಷಮಿಸಬೇಕು. ತಮ್ಮನ್ನು ಗಮನಿಸೋದಕ್ಕೆ ಅವಕಾಶವಾಗಲಿಲ್ಲ. ಇದ್ದ ಹಣ ನಾಲ್ಕಾರು ಅಯೋಗ್ಯರಲ್ಲಿ ಚೆಲ್ಲಿಬಿಟ್ಟು ಅವರ ಮನೇ ಬಾಗಿಲಿಗೆ ಅಲೆದೂ ಅಲೆದೂ ನಾನೂ

ಪರದಾಡತಾ ಇದ್ದೇನೆ. ನೀವು ಕಂಡಹಾಗೇ ಎಲ್ಲರೂ ವಾಯಿದೇ ಹೇಳೋವ್ರೇ ಆಗ್ಹೋಯಿತಲ್ಲಾ! ಕೈಗೆ ಸಿಕ್ಕದೆ ತಪ್ಪಿಸಿಕೊಂಡು ತಿರುಗೋವ್ರು ಬೇರೆ. ಈಗ ನೋಡಿ ಈ ಹಾಳುಸಾಲಗಳು ಕೊಡೋದೆ ಬಹಳ ತಪ್ಪು.

ಮು:—ಸ್ವಾಮಿ! ನಾನೆಲ್ಲರೂ ಬಂಧುಗಳು. ಹೀಗೇ ಒಬ್ಬರಿಗೊಬ್ಬರು ಸಹಾಯ ಮಾಡಬೇಕು — ಅದೂ ಕಷ್ಟಕಾಲದಲ್ಲಿ ನಿಮ್ಮನ್ನೇ ನೆಚ್ಚಿ ಕೊಂಡಿದ್ದೇನೆ.

ಪ್ರ:—ಪಾಂಡುರಂಗರಾಯರೇ! ಎಲ್ಲಾ ಅನಿರೀಕ್ಷಿತ ನೋಡಿ.

ಅ:—ತಾವು ತಕ್ಷಣ ಎರಡುಸಾವಿರ ಹೇಗಾದರೂ ಒದಗಿಸಿಕೊಡಬೇಕು. ಇಲ್ಲ ದಿದ್ದರೆ ವಿಧಿಯಿಲ್ಲ.

ಪಾಂ:—ಏನೋ ನೋಡಿ. ನನ್ನ ಗ್ರಹಚಾರ ಹೇಗಿದೆ. ತಾವು ಹೇಳೋದೆಲ್ಲಾ ಸರಿ. ಆದರೆ ತಕ್ಷಣ ಹಣ ಒದಗಬೇಕಲ್ಲಾ.

ಮು:—ನಮಗೂ ಸಮಯ ನೋಡಿ. ಇಲ್ಲದಿದ್ದರೆ ತಮಗೆ ತೊಂದರೆಕೊಡ ಬೇಕಾದ ಪ್ರಮೇಯವಿರಲಿಲ್ಲ.

ಪಾಂ:—ಅಯ್ಯೋ, ಎಲ್ಲಿ ಹೋಗುತ್ತೇಂದ್ರೆ. ತಮ್ಮಂಥಾವ್ರಿಗೆ ಕೊಟ್ರೆ ?

ಮು:—ಏನಾದ್ರೂ ಮಾಡಿಸ್ವಾಮಿ! ಕಾಲಮಿಂಚಿಹೋಗುತ್ತೆ. ಕಷ್ಟ ಪ್ರಬಲ ವಾಗಿದೆ.

ಪಾಂ:—(ಮುಕುಂದನನ್ನು ನೋಡಿ) ಏನೋ ಪಾಪ! ನೀವೂ ಬಹಳ ಒಳ್ಳೇವ್ರು.ಕಷ್ಟದಲ್ಲಿ ಸಿಕ್ಕಿ ಬಿದ್ರಿ. ಆದರೆ ನಿಮ್ಮ ತಪ್ಪಲ್ಲಾನ್ನೀ.

ಪ್ರ:—ಎಲ್ಲಾ ತಮಗೆ ತಿಳಿದ ವಿಷಯವೇ. ಇನ್ಯಾಕೆ ಪಾಂಡುರಂಗರಾಯರೆ! ಏನೋ ದೊಡ್ಡಮನಸ್ಸು ಮಾಡಿ ಈ ಸಮಯದಲ್ಲಿ ತಾವು ಕೈಬಿಡ ಬಾರದು. ಮುಖ್ಯ ತಮ್ಮನ್ನೇ ನಂಬಿದ್ದೇವೆ.

ಪಾಂ:—ಅಯ್ಯೋ ಭಾರಿಮಾತು! ಅಷ್ಟಕ್ಕೆ ನಾನು ಅರ್ಹನೆ ?

ಅ:—ಏನು ಸ್ವಾಮಿ! ಹಾಗಂದ್ರೆ ? ತಾವು ದೊಡ್ಡವರು. ವಯಸ್ಸಿನಲ್ಲಿ, ಅನುಭವದಲ್ಲಿ! ಇಲ್ಲಾಂದ್ರೆ ಹೋಗುತ್ತೆಯೇ ಹೇಳಿ.

ಪಾಂ:—ಎಲ್ಲಾ ದೈವೇಚ್ಛೆ ನೋಡಿ. ನಮ್ಮ ಕೈಲೇನಿದೆ ? ನಮ್ಮಪ್ಪನ ದಯ ಒಂದು ಚೆನ್ನಾಗಿರಬೇಕು ಸ್ವಾಮಿ ಎಲ್ಲಾದಕ್ಕೂ ! (ಎಂದು ಮೇಲೆ ಕೈತೋರಿಸುವನು)

ಪ್ರ:—ಅದು ನಿಜ ಸ್ವಾಮಿ ! ದೇವರು ಯಾರ ರೂಪದಲ್ಲಿಯಾವರೂ ಕಾಣಿಸ್ಕೋಬೇಕಲ್ಲಾ ? ಈಗ ಸದ್ಯಕ್ಕೆ ತಮ್ಮ ಪುಣ್ಯಾಂತರ !

ಪಾಂ:—ಅದಿರಲಿ. ಈಗೊಂದು ಮುಖ್ಯವಾದ ವಿಷಯ ನೋಡಿ. ಆ ಮಹದೇವಪ್ಪ ಇದ್ದದ್ದರಲ್ಲಿ ಸಾಚಾಮನುಷ್ಯ. ಅಂಥಾವನು ಅದೇನೇನೋ ಪಿತ್ತಲಾಟ ನಡಿಸ್ತಿದ್ದಾನೇಂತ ನಮ್ಮ ನಾರಾಯಣ ತಮ್ಮೆದುರಿಗೆ ಹೇಳ್ಲಿಲ್ಲವೇ ? ನನ್ನ ಹತ್ತರ ಮುಚ್ಚುಮರೆ ಇಲ್ಲ ಸ್ವಾಮಿ ! ನೋಡಿ ಆತ ಅಸಲು ಮೂರುಸಾವಿರ. ಇದರಮೇಲೆ ಬಡ್ಡಿಗಿಡ್ಡಿ ಎಲ್ಲಾ. ಈ ವೇಳೆಗೆ ಹಣ ಕೈಗೆ ಬಂದು ಎಂಟು ದಿವಸ ಆಗಿರಬೇಕಾಗಿತ್ತು. ಈಗ ನೋಡಿದ್ರೆ ಏನೋ ರಗಳೆ ಆರಂಭವಾಗಿದೆ.

ಆ:—ತಮಗೇನು ಸ್ವಾಮಿ ? ಕೊಡಬೇಕೂಂದ್ರೆ ಆ ಹಣವೇ ಬರಬೇಕೇ !

ಪ್ರ:—ಒಂದು ರುಜು ಹಾಕಿದ್ರೆ ಬ್ಯಾಂಕಿನಿಂದ ಬೇಕಾದಷ್ಟು ಕಳಿಸ್ತಾರೆ ನಿಮ್ಮ ಮನೇಬಾಗಿಲಿಗೆ.

ಮು:—ಅಷ್ಟಲ್ಲದೇನು ! ಪಾಂಡುರಂಗರಾಯರೇ ! ತಮಗೇ ಕಷ್ಟ ಅಂದ ಮೇಲೆ ಇನ್ನು ನಮ್ಮಂತಹವರ ಪಾಡು ಹೇಗೇಂತ ?

(ಪ್ರವೇಶ: ನಾರಾಯಣ)

ಪಾಂ:—ಎಲ್ಲೋ ಬಂದನೇನೋ ಅಡಿಗೆ ಕಿಟ್ಟ ?

ನಾ:—ಅವರತಾಕ್ಕಿನ್ನೂ ಓಗ್ನಿಲ್ಲಾ ಬುದ್ಧಿ !

ಪಾಂ:—ಅಲ್ಲವೋ ! ಹೇಳಿದ ಕೆಲಸ ತಕ್ಷಣ ಯಾವತ್ತು ಮಾಡಿದ್ದೀಯಾ ? ನೀನೂಂತ? ಇನ್ನಾ ಹೋಗ್ಲಿಲ್ಲವಂತೆ ! ಏನು ಮಾಡ್ತಾ ಇದ್ದೇಂತ ?

ನಾ:—ಬುದ್ಧಿ ! ಅಲ್ಲಿಗೋಗೋಣಾಂತ ಒಂಟೆ. ಅಟ್ಟರಾಗ ಆ ಮಾದೇವಪ್ಪನ ಕಡೇವ್ರು ಒಬ್ಬರು ಸಿಕ್ಕಿದ್ರು. ಮಾದೇವಪ್ನೋರ ಎಂಡ್ರು ಕಾಯಿಲೇ ಆಗಿರ್ನಿಲ್ಲವ್ರಾ ? ಅವರು ತೀರಿಕೊಂಡು ಬುಟ್ರಂತೆ ಈಗ ಬಸೀ ಒತ್ನಲ್ಲಿ.

ಅದ್ನೇಳ್ಬುಟ್ಟು ಓಗಾಣಾಂತ ಬಂದೆ ಬುದ್ಧಿ ! ಟೇಪಿಡ್ (Typhoid) ಅಂತೇ ಬುದ್ಧಿ.

(ಹೊರಡುವನು)

ಪಾ:—ಹೊಂ ! ನನ್ನ ಗ್ರಹಚಾರ! ಇನ್ನು ಆ ಮಹದೇವಪ್ಪನ ಹಣ ಸದ್ಯ ದಲ್ಲಿ ಬಂದ ಹಾಗೆಯೇ ಆಯಿತು. ನೋಡಿ ಹೀಗಿದೆ, ನನ್ನ ಲೇವಾದೇವಿ ಸಮಯಕ್ಕೆ ಒಂದೂ ನೆಚ್ಚಿಕೊಳ್ಳೋ ಹಾಗಿಲ್ಲ.

ಪ್ರ:—ಪಾಂಡುರಂಗರಾಯರೇ ! ತಮಗೂ ಅನಿರೀಕ್ಷಿತ ಚಿಂತೆಗಳಿವೆ. ಇಲ್ಲಾ ಅಂತ ಹೇಳೋಹಾಗಿಲ್ಲ. ಆದರೂ ಮುಕುಂದನ ಸಂದರ್ಭ ಹಾಗಿದೆ ನೋಡಿ ಈಗ.

ಅ:—ನಿನ್ನೆಯೇ ಎಲ್ಲಾ ವಿಶದವಾಗಿ ಹೇಳಿದೆವಲ್ಲಾ ತಮಗೆ.

ಪ್ರ:—ಈಗ ಸುಮ್ಮನೆ ಚರ್ಚೆ ಮಾಡೋದು ಯಾತಕ್ಕೆ? ದೊಡ್ಡ ಮನುಸ್ಸು ಮಾಡಿ ಸಹಾಯಮಾಡಿ ಸ್ವಾಮಿ ! ಮುಕುಂದನ ಮಾನ ಉಳಿಸಿ.

ಅ:—ತಮ್ಮ ಸಹಾಯವನ್ನು ನಾವೆಂದಿಗೂ ಮರೆಯೋದಿಲ್ಲ.

ಪ್ರ:—ರಾಯರೇ ! ತಮ್ಮ ಹಣಕ್ಕೆ ನಾವಿಬ್ಬರೂ ಗ್ಯಾರಂಟಿ. ಇನ್ನೇನು ಸ್ವಾಮಿ!

ಪಾ:—ಛೇ, ಛೇ ! ಅವಲ್ಲಾಂದ್ರೆ. ನನಗೆ ಗ್ಯಾರಂಟೀಗೀರಂಟೀ ಏನೂ ಬೇಕಾಗಿಲ್ಲ.

ಪ್ರ:—ಮತ್ತೇನು ಸ್ವಾಮಿ ಹಾಗಾದ್ರೆ ?

ಪಾ:—ನನಗೆ ಗ್ಯಾರಂಟಿಮಾತು ಬೇಕಾಗಿಲ್ಲ. ಅವರೇನು ನನಗೆ ಹೊಸಬರೇ ? ಅವರು ತೀರ್ಥರೂಪರವರು, ನನಗೆ ಬಹಳ ಬೇಕಾದವರು ನೋಡಿ. ಮುಕುಂದರಾಯರ ಮಾತೊಂದೇ ಸಾಕು ನನಿಗೆ.

ಅ:—ಸರಿ, ಹಾಗಿದ್ದಮೇಲೆ ಏನು ತಮ್ಮ ಸಂಕೋಚ ? ತಮಗೆ ಉಚಿತ ಕಂಡುಬಂದಂತೆ ಬಡ್ಡಿ ಹಾಕಿ. ಇನ್ನೇನು ಸ್ವಾಮಿ ?

ಪಾ:—ಅಯ್ಯೋ ನೋಡಿದ್ರಾ - ಬಡ್ಡಿ ಮಾತು ಹಾಗಿರಲಿ – ಅದಕ್ಕಲ್ಲಾಂದ್ರೆ ಕೊನೇಗೆ ಮುಕುಂದರಾಯರು ಪತ್ರ ಬರೆಕೊಡಬೇಕೂಂತಲೂ ನಾನು ನಿರ್ಬಂಧ ಮಾಡೋಲ್ಲ. ಆದರೆ................

ಪ್ರ:—ಏನು ಹೇಳಿಬಿಡಿ ಸ್ವಾಮಿ !

ಮು:—ತಮ್ಮ ಮನಸ್ಸಿನಲ್ಲಿರೋದು ವ್ಯಕ್ತವಾಗಿ ಹೋಗಲಿ.

ಪಾ:—ನೋಡಿ ಒಂದೆಂಟು ದಿವಸಕ್ಕೆ ಮುಂಚೆಯಾಗಿದ್ರೆ ಎರಡಲ್ಲ ಐದು ಸಾವಿರವಾದ್ರೂ ಕೊಡ್ತಾ ಇದ್ದೆ. ಈಗ ಸ್ವಲ್ಪ ಇಕ್ಕಟ್ಟು. ಆದರೆ.......

ಪ್ರ:—ಆದರೆ ?

ಪಾ:—ಪ್ರಭಾಕರರಾಯರೇ ! ಸ್ವಲ್ಪ ಹೀಗೆಬನ್ನಿ. (ಎಂದು ಕರೆದು ಕಿವಿಯಲ್ಲಿ ಎರಡು ಮಾತುಗಳನ್ನು ಹೇಳುವನು — ಅನಂತರ) ಆದಕ್ಕೊಪ್ಪ್ಕೊಳ್ಳೋದಾದ್ರೆ ಆಗಬಹೂದೂಂತ.

ಮು:—ಏನಪ್ಪಾ ಅವರು ಹೇಳೋದು ?

ಪ್ರ:—(ಮುಕುಂದನ ಕಿವಿಯಲ್ಲಿ ಏನೋ ಹೇಳುವನು) ನೋಡು. ನಿನ್ನಿಷ್ಟ.

ಮು:—ಇನ್ನೇನು ಮಾಡೋದು ?

ಪ್ರ:—(ಅನಂತನ ಕಿವಿಯಲ್ಲಿಯೂ ಹೇಳುವನು) ಸರಿ ನೀನೇನು ಹೇಳ್ತೀಯಪ್ಪಾ!

ಅ:—ದೇವರ ಇಚ್ಛೆ ಇದ್ದಂತೆ ಆಗಲಿ.

ಮು:—ನಾನು ಹೇಳೋದೂ ಅದೆ.

ಪಾಂ:—ಸರಿ. ಆದರೆ ನಾಳೆ ದಯಮಾಡಿಸಿ. ಅಲ್ಲಿಗೆ ತಾವು ಆ ವಿಷಯ ಒಪ್ಪಿಕೊಂಡ ಹಾಗೆ ತಾನೇ ಲೆಕ್ಕ ?

ಪ್ರ:—ಹಾಗೇ ಇಟ್ಕೊಳ್ಳಿ.

ಪಾ:—ಸರಿ. ಬಹಳ ಶ್ರಮವಾಯ್ತು ತಮಗೆ.

ಮು:—ಶ್ರಮವೇನು ? ಕೆಲಸ ಆದರೆ ಎಲ್ಲಾ ಶ್ರಮವೂ ಸಾರ್ಥಕವಾದಹಾಗೆ.

ಪಾ:—ನಿಮ್ಮ ಭಾಗ ನೀವು ನೆರವೇರಿಸಿದರೆ ನನ್ನ ಭಾಗವೂ ನೆರವೇರಿದಂತೆಯೇ

(ಪ್ರವೇಶ : ನಾರಾಯಣ)

ನಾ:—ಬುದ್ಧಿ ! ನಾ ಓಗ್ತಿದ್ದಂಗೇ ಎದುರಿಗೇ ಸಿಕ್ಕಿದ್ರು ಅಡಿಗೇವ್ರು. ಅವರೆಲ್ಲೋ ಮದುವೇಮನೇಗೇ ರೋಜುಕೆಲಸಕ್ಕೋಯ್ತಾರಂತೆ. ಏಡು ದಿನ ಬರೋಕ್ಕಾಗಾಲ್ಲಾಂತ ತಮ್‌ತಾವ್ ಏಳೇಳಿದ್ರು ಬುದ್ಧಿ !

ಪಾ:—ಸರಿ, ನೀನ್ನ ಡಿ. (ಮುಕುಂದ ಮೊದಲಾದವರನ್ನು ನೋಡಿ) ಈ ಹಾಳಾದ ಅಡಿಗೇವರನ್ನ ನೆಚ್ಚಿಕೊಂಡು ಇನ್ನೆಷ್ಟು ದಿವಸಾಂತ ನಾನು ಹೀಗೆ ಪ್ರಾಣಬಿಡೋಕಾಗುತ್ತೆ ಹೇಳಿ. ಬದುಕಿದಷ್ಟು ದಿವಸವೂ ಬದುಕಿ ಕಡೆಗಾಲಕ್ಕೆ ಕೈಮೇಲೆ ನೀರೂಂತ ಹಾಕೋದಕ್ಕೆಹೆಂಡತೀಂತ ಒಬ್ಬಳಿಲ್ಲದಿದ್ರೆ ಹೀಗೇ ಅಲ್ಲವೆ ತಾಪತ್ರಯ? ಎಷ್ಟು ಹಣವಿದ್ರೆ ಏನು ಪ್ರಯೋಜನ ಹೇಳಿ ಸ್ವಾಮಿ!

ಪ್ರ:—ಅದು ನಿಜ ಸ್ವಾಮಿ! ಹಾಗಾದ್ರೆ ನಮಗೆ ಅಪ್ಪಣೆಯಾಗುತ್ತದೆಯೇ.

ಪಾಂ:—ದಯಮಾಡಿಸಿ. ಅಂತೂ ನಾಹೇಳಿದ್ದು ಮಾತ್ರ ತಪ್ಪಕೂಡದು.

ಮು:—ಊಟಕ್ಕೆ ನಮ್ಮ ಮನೇಗೇ ದಯಮಾಡಿಸಬಹುದಲ್ಲಾ.

ಪಾ:—ಆಗಲೀಂದ್ರೆ ತಮ್ಮ ವಿಶ್ವಾಸವೊಂದಿದ್ರೆ ಅದಕ್ಕೇನಂತೆ?

ಅ:—ಹಣದ ವಿಷಯ ಮಟ್ಟಿಗೆ ..........

ಪಾ:—ಇನ್ನಾ ವಿಷಯ ನನಗೆ ಬಿಡೀಂದ್ರೆ.

(ಮೂವರೂ ಹೊರಡುವರು)

(ಪ್ರವೇಶ ನಾರಾಯಣ)

ನಾ:—ಅಂಗಾರೆ ಊಟಕ್ಕೇನು ಮಾಡ್ತೀರಿ ಬುದ್ಧಿ? ಓಟ್ಲಾಗ್ನಿಂದ ತಂದು ಮಡಗೂಂತ ಏಳಲ್ವಾ ಬುದ್ದಿ?

ಪಾಂ:—ಎಷ್ಟು ಹಣವಿದ್ರೆ ಏನು ಸುಖವೋ ನಾರಾಯಣಾ! ಕಡೆಗಾಲಕ್ಕೆ ಹೆಂಡತೀಂತ ಒಬ್ಬಳಿಲ್ಲದಿದ್ರೆ?

ನಾ:—ಓಗಲಿ, ಒಂದು ಮದುವೇನಾರಾ ಮಾಡ್ಕೊಳ್ಳಿ ಬುದ್ಧಿ!

ಪಾಂ:—ಹಾಂ! ನಾನು ಮದುವೇ ಮಾಡಿಕೊಂಡ್ರೆ ಯಾರಾದ್ರೂ ನೋಡಿ ನಗೋಲ್ವೇನೋ?

ನಾ:—ಅಯ್ಯೋ ಬುಡಿಬುದ್ಧಿ! ಎಂತೆಂತೇವ್ರೋ ಮದುವೇ ಆಗವ್ರಂತೆ. ತಾವಾಗಾಕಾಗ್ದಾ! ತಮಗೇನು ಅಣವಿಲ್ಲವ್ರಾ? ರೂಪೇನಾರಾ ಕಮ್ಮಿ ಯಾಗೈತಾ? ಅತವಾಮೀರಿ ಓಟೊಂದು ವಯಸ್ಸಾಗೋಗಿ ಬುಟ್ಟೈತಾ?

ಪಾಂ:—ಅಲ್ರೋ ಇವನಿಗ್ಯಾಕೆ ಮದುವೇಂತ ಜನರು ಪರಿಹಾಸ್ಯ ಮಾಡೋ ದಿಲ್ವೇನೋ ?

ನಾ:—ಔದು ಬುದ್ಧಿ ! ಮಾಡ್ತಾರೆ ದಿಟ. ಅವರೆಲ್ಲಾ ಬಂದು ನಿಮ್ಮ ಸಮ ಯಕ್ಕಾಯ್ತಾರಾ ? ಯಾರವೇನು ಸ್ವಾಸ್ಥ ತೆಗೀರಿ ಬುದ್ಧಿ ! ಮಕ್ಕ ಳಿದ್ದರೇನೇ ಸಂದ ಮನೇಗೆ. ಕಷ್ಟಸುಖಾ ಇಸಾರಣೇ ಮಾಡೋಕೆಂತ ಒಂದು ಎಣ್ಣು ಮನೆಯಾಗಿದ್ರೇನೇ ಸಂಸಾರಾಂತ. ಕಂಡೋರ ಕೈಗೆ ಏಟು ದಿನಾಂತ ಕಾಯೋಕಾಯ್ತದೆ ಏಳಿ ಬುದ್ಧಿ ! ಅದ್ಕೇ ಪದಾ ಕೂಡು ಏಳವ್ರಲ್ಲಾ—

ಬೆಚ್ಚನೆ ಮನೆಯಾಗೆ । ವೆಚ್ಚಕ್ಕೆ ಹೊನ್ನಾಗೆ
ಇಚ್ಛೆಯನರಿತ ಸತಿಯಾಗೆ । ಕಿಚ್ಚು ಸರ್ಗಕೆಂದ ॥ ಸರ್ವಜ್ಞ ॥

ಪಾ:—ನೀನು ಹೇಳೋದು ಸರಿಕಣೋ. ಆದರೆ ಈ ವಯಸ್ಸಿನಲ್ಲಿ ನನಗೆ ಹೆಣ್ಣು ಯಾರು ಕೊಡ್ತಾರೋ ಮದುವೆಮಾಡ್ಕೋಂತ ?

ನಾ:—ಬುದ್ಧಿ ! ಅಂಗಂತ ಏಳ್ಕೊಂಡು ಒಂಟ್ರೆ ಎಣ್ಣು ಕೊಟ್ಟಾರಾ ಏಳಿ ಮತ್ತೆ. ಇವರ ತಾಪಾ ಏನೋ ಐಬದೇಂತ ತಿಳುಕೋತಾರೆ ಜನ ಗೋಳು. ತಾವು ನೆಗ್ನ ಆಗೋಕಿಲ್ವೇನೋಂತ ಸುಮ್‌ಕವ್ರೆ ಜನ ಗೋಳು. ನೆಗ್ನ ಆಯ್ತೀನೀಂತ ಧೃಢವಾಗಿ ನಾಕುಜನಗೋಳು ತಾವಾ ಏಳಿದ್ರಲ್ವಾ ನಾನು ತಾನೂಂತ ಯಾರಾದ್ರೂ ಮುಂದು ಬರೋದ್ಕೆ ? ನಿಮ್ಗೆಣ್ಣುಕೊಡೋಕೂ ಕಣಿಕೇಳೋಕೋಯ್ತಾರಾ ಯಾರಾರಾ ?

ಪಾಂ:—ಹಾಗಾದರೆ ಮಾಡಕೋಬಹುದೂನ್ನು ?

ನಾ:—ಅದಕಾಕ್ನೇಪ್ಣೆ ಏನ್ಮೈತೆ ಬುದ್ಧಿ ? ಬೇಸಾಗಿ ಮಾಡ್ಕೋಬೋದು - ಎಂತೆಂತೇವ್ರೋ ಮದುವೆ ಆಗವ್ರೇಂತೆ ತಮಗ್ಯಾಕಾಗಬಾರದೂಂತ ?

ಪಾಂ:—ಸರೀನ್ನು. ಹೂಂ! ನಾರಾಯಣ !

ನಾ:—ಬುದ್ಧಿ !

ಪಾಂ:—ಹೋಗಿ ಟಪ್ಪಾಲು ತಕ್ಕೊಂಡು – ಹಾಗೇ ಬರತಾ ಮುಕುಂದಪ್ಪಾ ವರ ಮನೆಗೆ ಹೋಗಿ ನಾನಲ್ಲೇ ಬರ್ತೇನೆ ಊಟಕ್ಕೇಂತ ಹೇಳು.

ನಾ:—ಅಪ್ಪಣೆ ಬುದ್ಧಿ !

(ನಾರಾಯಣನು ಹೊರಡುವನು)

ಪಾಂ:—(ಸ್ವಗತ) ಹಾಂ ! ನನ್ನ ರೊಟ್ಟಿ ತುಪ್ಪದಲ್ಲಿ ಬಿದ್ದಂತೆಯೇ ಸರಿ. ಮುಕುಂದನನ್ನು ನಾನ್ನೇ ಹುಡುಕ್ಕೊಂಡು ಹೋಗಬೇಕಾಗಿತ್ತು. ಅದಕ್ಕೆ ಬದಲು ಆತನೇ ನನ್ನಲ್ಲಿ ಬರೋಂತೆ ಆಯಿತು. ಇದಕ್ಕೇ ಅದೃಷ್ಟ ಅಂತ ಹೇಳೋದು, ಅದಿರಲಿ. ಆ ಹುಡುಗಿ ನನ್ನೊಪ್ತಾಳೆಯೋಂತ ? ಹೂಂ ! ಒಪ್ಪದೇನು ? ಈಗಿನ ಕಾಲದಲ್ಲಿ ಹಣಕ್ಕೆ ಮಿಂಚಿದ್ದ ವಯಸ್ಸು ? ನಾರಾಯಣ ಹೇಳೋದೇನೇನೂ ಸುಳ್ಳಲ್ಲ. ನಾನು ಮದುವೆ ಮಾಡ್ಕೋತೀನೀಂದ್ರೆ ಯಾರಾದ್ರೂ ಕೊಡ್ತಾರೆ ಹೆಣ್ಣನ್ನ. ಆದರೆ ನನ್ನ ಮನಸ್ಸು ಲಲಿತೆನ್ನೇ ಮದುವೇ ಮಾಡಿಕೋಬೇಕೂಂತ! ಅವಳನ್ನು ಅಂದು ಹುಟ್ಟಿದಹಬ್ಬದ ಕೋಲಾಹಲದಲ್ಲಿ ನೋಡಿದ ಮೇಲಲ್ಲವೆ ಈ ಮದುವೇ ಹುಚ್ಚು ನನಗೆ ಹಿಡಿದದ್ದು ? ಲಲಿತೆಯ ರೂಪ ! ಅಚ್ಚುಮೆಚ್ಚು ! ಒಳ್ಳೇ ರತಿದೇವಿ ! ಎರಡು ಕಣ್ಣು ಸಾಲದು ನೋಡೋದಕ್ಕೆ. ಹದಿನಾಲ್ಕು ವಯಸ್ಸಾದರೂ ಇಪ್ಪತ್ತು ವಯಸ್ಸಿನ ಬೆಳವಣಿಗೆ. ಹುಡುಗಿ ಹೇಗಾದ್ರೂ ಆಗಲಿ—ಬಹುಲಕ್ಷಣ ! ಬಹು ಲಕ್ಷಣ ! ಇದರಮೇಲೆ ನೋಡಬೇಕು. ಹೇಗಾದರೂ ಅವಳನ್ನು ಮದುವೆ ಮಾಡಿಕೊಳ್ಳೋದೆ ಸರಿ.



ದೃಶ್ಯ ೬] [ಸ್ಥಾನ: ಬೀದಿ

[ಪ್ರವೇಶ: ಪ್ರಭಾಕರ್]

ಪ್ರ:—(ಸ್ವಗತ) ಪಾಂಡುರಂಗನಿಂದ ಸಾಲ ತೆಗೆದು N. J. ದಾಸ್‌ರವರಿಗೆ ಪಾವತಿಮಾಡಿಯಾಯಿತು. ಆದರೇನು ? ಅಂದು ಪಾಂಡುರಂಗನು ಮುಕುಂದನಿಗೆ ಏಕಾಏಕಿ ಸಾಲಕೊಡಲು ಒಪ್ಪಲಿಲ್ಲ. ಲಲಿತೆಯನ್ನು ತನಗೆ ವಿವಾಹಮಾಡಿಕೊಡುವುದಾಗಿ ಮುಕುಂದನು ಪ್ರಮಾಣಮಾಡುವುದಾದರೇನೇ ತಾನು ಅವನಿಗೆ ಸಾಲಕೊಡುವುದಕ್ಕೆ ಸಮ್ಮತಿಸುವೆನೆಂದು ಹೇಳಿದನು. ಇದೇ ಪಾಂಡುರಂಗನು ನನ್ನ ಕಿವಿಯಲ್ಲಿ ಹೇಳಿದ ರಹಸ್ಯವಾದ ಮಾತು. ಆದರೆ ಇದು ಮುಕುಂದನಿಗೆ ಸಮ್ಮತಿಯಿಲ್ಲದಿದ್ದರೂ ನಿರ್ಬಂಧದಿಂದ ಆತನು ಒಪ್ಪಿಕೊಳ್ಳಬೇಕಾಯಿತು. ಹಣದ ದರಿದಿಗಾಗಿ ಎಷ್ಟು ಜನರು ಹೀಗೆ ಇಕ್ಕಟ್ಟಿನಿಂದ ಪಾರಾಗಲೋಸುಗ —ವಯೋಭೇದಗಳನ್ನು ಗಣನದೆ, ಮನಸ್ಸು ಒಪ್ಪದ - ಬಲವಂತ ವಿವಾಹಗಳಿಗೆ ಸಮ್ಮತಿಸಿರುವರು ? ಅನಂತನಿಗಾಗಲಿ, ನನಗಾಗಲಿ ಈ ಮುದುಕ ಪಾಂಡುರಂಗನಿಗೆ ಲಲಿತೆಯನ್ನು ಧಾರೆಯೆರೆವುದು ಒಡಂಬಡುವುದಿಲ್ಲ. ಲಲಿತೆಗೆ ಈ ವಿಚಾರವು ತಿಳಿದರೆ ಅವಳು ಪ್ರಾಣತ್ಯಾಗ ಮಾಡಿಕೊಳ್ಳುವುದಕ್ಕೂ ಹಿಂಜರಿಯುವುದಿಲ್ಲ. ಮುಕುಂದನ ಹೆಂಡತಿಯಾದ ಸೀತೆಯೂ ಈ ವಿವಾಹಕ್ಕೆ ಸಮ್ಮತಿಸಲಾರಳು. ಹೀಗೆ ಒಬ್ಬರಿಗೂ ಒಪ್ಪದ ಈ ವಿವಾಹದಲ್ಲಿ ಪಾಂಡುರಂಗನಿಗೆ ಅತ್ಯಂತ ಪ್ರಬಲವಾದ ಕುತೂಹಲವು ಹುಟ್ಟಿರುವುದು. ಪಾಂಡುರಂಗನ ಉದ್ದೇಶಕ್ಕೆ ಬೆಂಬಲವೆಂದರೆ—ಅವನು ಮುಕುಂದನಿಗೆ ಕೊಟ್ಟಿರುವ ಸಾಲ ! ತಂದೆಯ ಸಾಲದ ನಿಮಿತ್ತ ಮಗಳನ್ನು ಬಲವಂತವಾಗಿ ವಿವಾಹಮಾಡಿಕೊಳ್ಳುವದೆ ! ಅದೂ ವರಸಾಮ್ಯವಿಲ್ಲದ ವಿವಾಹ ! ಇದಕ್ಕೆ ವಧುವಿನ ಒಪ್ಪಿಗೆಯು ಎಲ್ಲಿಂದ ಬರಬೇಕು ? ಈ ತೆರನಾದ ವಿವಾಹ ಪ್ರಯತ್ನವು ಅನರ್ಥಕಾರಕವಲ್ಲವೆ ಮತ್ತೇನು ? ಹಣವನ್ನೇ ಆಧಾರವಾಗಿವುಳ್ಳ ಈ ವಿವಾಹವು ವಿವಾಹವಾದೀತೇ ? ಇದು ಕೇವಲ ವಧೂ ವಿಕ್ರಯ ! ಅದರಲ್ಲಿಯೂ ಬಲವಂತ ವಿಕ್ರಯ ! ಇಂತಹ ವಿಕ್ರಯದಿಂದ ಪೀಡಿತ ಕುಟುಂಬಗಳು ವಧಾಕೂಪದಲ್ಲಿ ಬಿದ್ದು ಹೊರ

ಳಾಡುವ ಸಂದರ್ಭಗಳು ಸಹಸ್ರಾರು. ಹೂಂ ! ಜಗಜೀವನದಾಸ್ ರವರ ಸಾಲದಿಂದ ಮುಕುಂದನು ಬಿಡುಗಡೆ ಹೊಂದಿಯಾಯಿತು. ಇನ್ನು ಈ ಪಾಂಡುರಂಗನ ಬಲವಂತ ಹಸ್ತಗಳಿಂದ ಲಲಿತೆಯನ್ನು ಬಿಡುಗಡೆ ಮಾಡಬೇಕು. ಈ ಬಲವಂತ ವಿವಾಹವನ್ನು ನಿಲ್ಲಿಸುವುದಕ್ಕಾಗಿ ತೀವ್ರ ಪ್ರಯತ್ನವನ್ನು ಮಾಡಬೇಕು. ಅದೂ ಮುಕುಂದನ ಪ್ರಮಾಣವು ಅಳಿಯದಂತೆ.

ಇದೊಂದು ಕಡೆಯಿರಲಿ. ಮುಕುಂದನಿಗುಂಟಾದ ಮಾನನಷ್ಟವನ್ನು ಸರಿಹೊಂದಿಸಿ ಆತನಿಗೆ ಮತ್ತೆ ಅದೇ ಉದ್ಯೋಗವು ದೊರೆಯುವಂತೆ ಮಾಡಬೇಕು. ಇವಕ್ಕಾಗಿ ಯಾವ ಪ್ರಯತ್ನವನ್ನಾದರೂ ನಾನು ಮಾಡಿಯೇ ತೀರುವೆನು. ಇನ್ನು ನಾನು ಹೋಗಿ ದಾಸ್‌ರವರ ಹತ್ತಿರ ಈ ಪ್ರಸ್ತಾಪವನ್ನು ಆರಂಭಿಸಿ ಮುಂದಿನ ಕಾರ್ಯವನ್ನು ತೊಡಗಬೇಕು. ಕಾರ್ಯವು ಫಲಕಾರಿಯಾಗುವವರೆಗೂ ಮುಕುಂದನಿಗೆ ಈ ಪ್ರಸ್ತಾಪವನ್ನು ತಿಳಿಯಿಸಕೂಡದು. (ಹೊರಡುವನು)

[ಪ್ರವೇಶ: ನಾರಾಯಣ]

ನಾ:—(ಸ್ವ) ಅಂತೂ ಲಲಿತಮ್ಮೋವ್ರನ್ನ ಮದುವೆ ಆಯ್ತಾನಿ, ಆಯ್ತಾನೀಂತಾರೆ ಎಜಮಾನ್ರು. ಅಂಗೂ ಒಂದೇಡು ದಫಾ ಮುಕುಂದಪ್ಪಾವರ ಮನೆಗೂ ಓಗ್ಬುಟ್ಟು ಬಂದ್ರು. ಮುಕುಂದಪ್ಪಾವರಿಗೆ ಏಡು ಸಾವಿರ ರೂಪಾಯಿ ಸಾಲಾನೂ ಕೊಟ್ರು. ಸುಮ್‌ಕೆ ಕೈಬಿಚ್ಚಿ ಅಣಾ ಕೊಡ್ತಾರಾ ನಮ್ಮೆಜಮಾನ್ರು? ಅದರಾಗೆ ಒಂದು ಕಂಡಿಸನ್ ಬೇರೆ ಮಾಡ್ಕೊಂಡವ್ರೆ; 'ನಿಮ್ಮ ಲಲಿತಮ್ಮೋವ್ರನ್ನ ಕೊಟ್ಟು ಮದುವೆ ಮಾಡ್ಬೇಕೂಂ'ತ. ಅದಕ್ಕೆ ಮುಕುಂದಪ್ಪಾವ್ರು 'ದೇವರಿಚ್ಛೆ ಇದ್ರೆ ಆಗಬೋದೂ'ಂತಲೂ ಏಳವ್ರಂತೆ. ಎಜಮಾನರ ಸಂತೋಸ ಇಂಗೇಂತ ಏಳಿತೀರದು. ಎಂಟುದಿನಕೊಂದು ದಫಾ ಚೌರಮಾಡಿಸ್ಕೋತಾ ಇರ್ನಿಲ್ಲ ಇವ್ರು. ಈಗೇನಂದ್ರೆ ದಿನ ಬುಟ್ ದಿನ ಮಾಡಿಸ್ಕೋತಾ ಅವ್ರೆ. ಅಯ್ಯೋ ನನ್ನೊಡೆಯಾ! ಇಂಗೆಲ್ಲಾ ಮಾಡಿದ್ರೆ ಇಲ್ಲದ ಪರಾಯಾ ಬಂದಾತಾ? ಅದೇನೋ ಏಳ್ತಾರಲ್ಲಾ ಗಾದೇನ್ನ 'ಸುಟ್ಟರೆ ಒಯ್ತದಾ ಉಟ್ಟುನಲ್ಲಿ ಬಂದ ಸುಳೀ'ಂತ. ಅಂತೂ ಅಂಗಾ

ಗೈತೆ ಇವರ ಪಾಡು. ಅಲ್ಲಾ ನೆರತ ಕೂದಲು ಮರಸಾಕಾಯ್ತದಾ ? ಊಂ! ಎಜಮಾನರಿಗೆ ಚಪಲ ಎಚ್ಚ್ಕೋಯ್ತು. ಇದರಮ್ಯೋಕ್ಕೆ ಓದು ಗೀದು ಕಲ್ತಪ್ರೆ ಲಲಿತವ್ವೋವ್ರು. ಈ ನಮ್ಮಯ್ನೋರೋ! ಇವರ ಕಾಲ ಕಂಡೋರು ಯಾರು? ಆ ಯೊವ್ವೋವ್ರು ಇವರನ್ನ ಒಪ್ಪ ಗಿಪ್ಪೋವಟ್ಟಿಗೆ ಕಾಣಿಸಾಕಿಲ್ಲ. ಇದರ ಮ್ಯೋಕ್ಕೆ ಕಂಕಣಾ ಕೂಡ ಬರ ಬೇಕಲ್ಲಾ ? ಅದ್ನ್ಯಾರು ಕಂಡವ್ರೆ ?

ಇದಾರಾಗೆ ಅವಸರ ಬೇರೆ ಉಟ್‌ಬುಟ್ಟೈತೆ? ಏನು ಸುಕ ಅನು ಬೇಪ್ಸೋಕೋ ? ಆಗಲೆ ಬರಕೊಟ್ಟುಬುಟ್ಟವ್ರೆ ಆ ಸಂಗಪ್ಪನ ಅಂಗಡೀಗೆ ಚೀಟೀಯು – ಸೀರೆ ಕುಪ್ಸ ಎಲ್ಲಾ ತತ್ತಾರೋ ಎಣ್ಣಿಗೆ ಕೊಡಾಕೇಂತ! ನೆಗ್ನ ನಿಕ್ಸಾಯಮಾಡೋ ತರದೂದು. ಊಂ! ಎಂಗಾರಾ ಆಗ್ಲಿ, ನಾ ಓಯ್ತಾನಿ. ಆಳೂಂತಂದ್ರೆ ಏಳಿದ ಕೆಲಸಾ ಮಾಡೋವ್ನೂಂತ್ಲೇ ಅಲ್ಲವಾ ? ಸರಿ ತಪ್ಪ ಅವನೇನಾರಾ ಕ್ವೆಚ್ಚನ್ ಮಾಡೋಂಗವ್ನಾ? ಒಳ್ಳೇದೋ ಕೆಟ್ಟದ್ದೋ—ಎಲ್ಲಾ ನಮ್ಮೊಡೆಯನಿಗೇ ಸೇರಿದ್ದೂಂತ ನಡೀತಾ ಇರಬೇಕು.



**ದೃಶ್ಯ ೭]** **[ಸ್ಥಾನ: ಮುಕುಂದನ ಮನೆ.**

[ ಪಾತ್ರಗಳು : ಮುಕುಂದ್, ಸೀತಾ, ಲಲಿತ, ಶ್ಯಾಮಲಾ, ಆನಂದ್ ]

ಆನಂದು:—ಅಮ್ಮಾ ! ಅಮ್ಮಾ ! ಎರಡಾಣೆ ಕೊಡಮ್ಮಾ !

ಸೀ:—ಯಾತಕಪ್ಪಾ ? ಎಲ್ಲಿಂದ ತರಲೋ ? ಸುಮ್ಮನೆ ಕಾಡಬೇಡವೋಪ್ಪಾ!

ಆ:—ಸ್ಕೂಲಿನಲ್ಲಿ "ಧ್ರುವವಿಜಯ ನಾಟಕಾ" ಆಡ್ತಾರಂತಮ್ಮಾ ! ನಾನೂ ಹೋಗ್ಬೇಕು.

ಸೀ:—ದಿನ ಬೆಳಗಾದ್ರೆ ಯಾವುದಕ್ಕಾದ್ರೂ ಹೀಗೆ ತಂಟೆ ಮಾಡ್ತೀಯಲ್ಲೋ ಅಣ್ಣಾ ! ಮನೇಲಿರೋ ಕಷ್ಟ ನೋಡಿದ್ರೆ ಒಂದಲ್ಲ, ಎರಡಲ್ಲ.

ಆ:—ಹೋಗಮ್ಮಾ ! ಯಾವಾಗ ಕೇಳಿದ್ರೂ ಕಷ್ಟ, ಕಷ್ಟಾಂತಲೇ ಹೇಳಾ ಇರು ನೀನು. ಮೊದಲೆಲ್ಲಾ ಕೇಳಿದಾಗ ಕೊಡ್ತಾ ಇರ್ಲಿಲ್ಲವೇನೋ ಪಾಪ? ಅಪ್ಪನಿಗೆ 350/- ರೂ. ಸಂಬಳ ಬರುತ್ತೆ. ನನಗೆ ಕೊಡ ಬೇಕೂಂದ್ರೆ ಎರಡಾಣೆ ಇಲ್ಲ ನಿನಗೆ !

ಸೀ:—ಆ ಕಾಲ ಹೋಯ್ತೋಪ್ಪಾ ಆನಂದು ! ಹಾಗೇ ಆಗಲಿ ; ಅಪ್ಪಾವ್ರಿಗೆ ಇನ್ನೊಂದು ಕೆಲಸ ಆಗ್ಲಿ ತಡಿ ; ಎರಡಿಲ್ಲದಿದ್ರೆ ನಾಲ್ಕಾಣೆ ಕೊಡೋಣವಂತೆ.

ಆ:—ಹೂಂ ! ಹೋಗಮ್ಮಾ ! ಆ ಗೂಡಿನಲ್ಲಿ ಒಂದು ರೂಪಾಯಿದೆ. ಅದಕ್ಕೆ ಚಿಲ್ಲರೆ ಮಾಡಿಸಿಕೊಂಡು ಬರ್ತೇನೆ (ಹೋಗುವನು)

ಸೀ:—ಲೋ ಆನಂದು ! ಆನಂದು ! ಹೂಂ ! ಹೊರಟೇಹೋದ (ಸ್ವಗತ) ಮೂರು ದಿವಸದಿಂದ ಕಟ್ಟಿಗೇವನ ಕಾಟ. ಪಕ್ಕದ ಮನೇಯಿಂದ ಒಂದುರೂಪಾಯಿ ಸಾಲ. ಅವನು ಬಂದರೆ ಕೊಟ್ಟುಬಿಡೋಣಾಂತಿದ್ದೆ. ಅದನ್ನು ತೆಕ್ಕೊಂಡು ನಡೆದ ಈ ಆನಂದು. ಅವನಿಗೇನು ಗೊತ್ತು ದೊಡ್ಡವರ ಕಷ್ಟ ?

ಅಯ್ಯೋ ದೈವವೇ ! ಇದೆಂಥಾ ಗ್ರಹಚಾರ ಪ್ರಾಪ್ತವಾಯಿತಪ್ಪಾ ನಮಗೆ ? ಇವರಿಗೆ ಕೆಲಸಹೋದ ಮೇಲಂತೂ ಹಳೇಸಾಲ ಬಲೀತು. ಹೊಸ ಸಾಲ ಬೆಳೀತು. ಈ ಸಾಲದ ಹೊರೆ ನಿಜವಾಗಿ ತೀರುತ್ತೆಯೇ ? ನಾಲ್ಕು

ಜನರಿದಿರಿನಲ್ಲಿ ನಾವೂ ನಾಣ್ಯವಾಗಿ ಬಾಳೋಕಾಲ ಯಾವಾಗ ಬರುತ್ತೋ ? ಇದರಲ್ಲೋ ಮನೇಲಿ ಒಂದಿದ್ದರೆ ಒಂದಿಲ್ಲ. ಮೈಮೇಲೆ ಹಾಕಿಕೊಳ್ಳೋದಕ್ಕೆ ನೆಟ್ಟಗೆ ಬಟ್ಟೆಯಿಲ್ಲ. ಇದ್ದುದೆಲ್ಲಾ ಹರೀತಾಬಂತು. ನಿಲ್ಲೋದಕ್ಕೇಂತ ಒಂದು ನೆರಳಿತ್ತು. ಅದೂ ಈಗ ಸಾಲಗಾರರ ಪಾಲಾಯಿತು. ನಮ್ಮ ಮನೇಗೆ ನಾವೇ ಬಾಡಿಗೆ ಕೊಡಬೇಕಾಯಿತು. ಈಚೆಗೆ ಆ ಬಾಡಿಗೇನೂ ಕೊಡೋದಕ್ಕೆ ಚೈತನ್ಯವಿಲ್ಲದಂತಾಯಿತು. ಮನೆ ಬಿಟ್ಬುಬಿಡೀಂತ ತಗಾದೆ ಬೇರೆ. ಇನ್ನು ಭಿಕ್ಷುಕರಂತೆ ಬೀದೀಲಿ ವಾಸಮಾಡೋದೊಂದೇ ಬಾಕಿ. ಈ ಸಂಕಟಗಳೆಲ್ಲಾ ಒಂದು ಪಕ್ಕದಲ್ಲಿರಲಿ.

ಆಫೀಸು ಹಣನಾದ್ರೂ ತೀರಿತಲ್ಲಾಂತ ಸಂತೋಷಪಟ್ಕೊಳ್ಳೋ ಹಾಗಿಲ್ಲ. ಆ ಕಷ್ಟ ಹೋಯಿತು. ಈಗ ಆ ಮುದುಕರ ಪಿಡ್ಗು ಬೇರೆ. ಅವರಿಗಾಗಿದೆ ಐವತ್ತಕ್ಕೆ ಮೇಲೆ. ಹ್ಯಾಗೆ ಲಲಿತೇನ್ನ ಎತ್ತಿಕೊಟ್ಬು ಬಿಡೋದು ಮದುವೇ ಮಾಡಿಕೊಳ್ಳೀಂತ ? ಹತ್ತಾರು ವರ್ಷ ಹಗಲಮೇಲೆ ಹಾಕಿಕೊಂಡು ಸಾಕಿ, ಸಲಹಿ, ಹೆಣ್ಣನ್ನು ಹಣ್ಣು ಮುದುಕರಿಗೆ ಮದುವೆ ಮಾಡಿಕೊಡೇದೇ ? ರತ್ನದಂಥಾ ಹುಡುಗೀ ಆಸೇನ್ನ ಕಾಡುಪಾಲು ಮಾಡೋದೇ ? ಇದಕ್ಕೆ ಬದಲು ಕಣ್ಣುಕಟ್ಟಿ ಅವಳನ್ನೇ ಕಾಡಿನಲ್ಲಿ ಬಿಟ್ಟು ಬಿಟ್ಟರೇನು ? ಅಥವಾ ಬಾವೀಲ್ಲಿ ತಳ್ಳಿದರೇನು ? ಹಾಗೂ ಆ ಮುದುಕರಿಗೆ ಎರಡು ಸಾವಿರ ರೂಪಾಯಿ ಸಾಲಕೊಡಬೇಕು. ಹೆಣ್ಣುಕೊಟ್ಟು ಆ ಶೋಕಾನ್ನ ಅನುಭವಿಸೋಣವೇ ? ಅಥವಾ ತಂದಸಾಲ ಹರಿಸೋದಕ್ಕೆ ಆಗದೆ ಪ್ರಾಣಬಿಟ್ಟುಕೊಳ್ಳೋಣವೇ ? ಅದರಲ್ಲೂ ಒಂದಲ್ಲ, ಎರಡಲ್ಲ; ಎರಡುಸಾವಿರ ! ಅಷ್ಟಕ್ಕೆ ನಾವೆಲ್ಲಿಂದ ಬಾಳಬೇಕು ? ಮೊನ್ನೆ ಒಂದು ರೂಪಾಯಿ ಕೈಸಾಲ ಹುಟ್ಟಿಸೋದಕ್ಕೆ ಅಷ್ಟೊಂದು ಪರದಾಡಿ ಬಿಟ್ಟೆ. ಅಯ್ಯೋ ಗ್ರಹಚಾರವೇ !

(ಮುಕುಂದನ ಪ್ರವೇಶ)

ಮು:—ಸೀತಾ ! ಸೀತಾ ! (ಎಂದು ಕರೆಯುವನು)

ಸೀ:—ಹೂಂ ! (ಎಂದು ಸುಮ್ಮನಿರುವಳು)

ಮು:—ಸೀತಾ ! ಇದೇನು ಮೌನ ? ಏನು ನಿನ್ನ ವ್ಯಥೆ ?

ಸೀ:— ವ್ಯಥೆಯೇನು ? ಅದನ್ನು ಬೇರೆ ಕೇಳಿ. ಒಂದೆರಡಾದರೆ ಚಿಂತೆಯಿಲ್ಲ. ಹೂಂ! ಅಂತೂ ಇಂಥಾ ಕಷ್ಟಗಳು ಅನುಭವಿಸೋದು ನಮ್ಮ ಹಣೇಲಿ ಬರೆದಿರಬೇಕೇ ?

ಮು:— ಕಷ್ಟಗಳನ್ನು ಬಾ ಬಾ ಎಂದು ಯಾರಾದರೂ ಪ್ರಾರ್ಥಿಸ್ತಾರೆಯೇ ಸೀತಾ ?

ಸೀ:— ಯಾರು ಪ್ರಾರ್ಥಿಸಿದಿದ್ದರೂ ನೀವೊಬ್ಬರಾದ್ರೂ ಇದ್ದೀರಲ್ಲಾ ಪ್ರಾರ್ಥಿಸೋದಕ್ಕೆ !

ಮು:— ಅಂದರೆ ?

ಸೀ:— ಅಂದರೆ ಅಷ್ಟೇ ! ಎಲ್ಲಾರನ್ನೂ ನಂಬಿಬಿಡ್ತೀರಿ. ಬೆಳ್ಳಗಿರೋದೆಲ್ಲಾ ಹಾಲೂಂತ ! ಅವರ ಮಾತಿಗೆ ಬೇಗ ಬೀಳ್ತೀರಿ. ಆಮೇಲೆ ಕಷ್ಟ ಬಂದಾಗ ಕಣ್ಣು ಕಣ್ಣು ಬಿಡ್ತೀರಿ.

ಮು:— ಏಕಾಏಕಿ ಹೇಗೆ ಸೀತಾ ಎಲ್ಲರಲ್ಲಿಯೂ ಅಪನಂಬಿಕೆ ಪಡೋದೂ ?

ಸೀ:— ಬೇಡಿ. ಎಲ್ಲರನ್ನೂ ನಂಬಿ. ಹೀಗಾಗಿ ಹೋಗಿಯೇ – ಹೆಂಗಸರ ಮಾತೇನು ಕೇಳೋದೂಂತಾ ಅಲಕ್ಷ್ಯ ಮಾಡಿಯೇ, ಎಷ್ಟೋ ಕುಟುಂಬಗಳು ಹಾಳಾಗಿದ್ದು.

ಮು:— ಈಗೇನು ಸೀತಾ ನೀನ್ಹೇಳ್ತಾ ಇರೋದು ?

ಸೀ:— ಅದೇಂದ್ರೆ ! ನಿಮ್ಮ ಆಫೀಸು ಸಮಾಚಾರ !

ಮು:— ಅದು ಕಳೆದುಹೋದ ಮಾತು. ಈಗ್ಯಾಕದರ ಪ್ರಸ್ತಾಪ ?

ಸೀ:— ಕಳೆದುಹೋದ್ದು ಯಾಕೆ ? ಅದರಿಂದಲೇ ಇಷ್ಟು ಅನರ್ಥಗಳು ಆಗಿರೋದು. ಅದನ್ನು ಸರಿಯಾಗಿ ತಿಳುಕೊಂಡ್ರೇನೇ ಮುಂದಕ್ಕಾದರೂ ಸ್ವಲ್ಪ ಹಿತವಿದೆ ಅಂತ ನಾ ಹೇಳೋದು.

ಮು:— ಅಂದ್ರೇ ? ಅದೇನು ಹೇಳಬೇಕೋ ಸ್ಪಷ್ಟವಾಗಿ ಹೇಳಿಬಿಡು ಸೀತಾ !

ಸೀ:— ಅಲ್ಲಾಂದ್ರೇ ! ಈ ರಾಮನಾಥ್, ರಘುವೀರ್, ಇವರಿಬ್ಬರೂ–ನಿಮ್ಮ ಕೈಕೆಳಗಿದ್ದವರು. ಅವರ ವಿಷಯದಲ್ಲಿ ಸ್ವಲ್ಪ ಎಚ್ಚರಿಕೆಯಿರಲೀಂತೆಂದೆ. ಅವರು ಜೂಜುಕೋರರು, ದುರಾಚಾರಿಗಳು - ಅಂತ

ಊರೆಲ್ಲಾ ಹೇಳ್ತಾ ಇದ್ರೂ ನಿಮ್ಮ ಕಿವೀಲಿ ಮಟ್ಟಿಗೆ ಬೀಳಲಿಲ್ಲ. ನಿಮ್ಮ ಪದವೀ ಪ್ರಾಶಸ್ತ್ಯ ನಿಮಗೇ ತಿಳೀಲಿಲ್ಲ. ಇಂಥಾವರನ್ನ ತಲೇ ಮೇಲೇರಿಸಿಕೊಂಡ್ರಿ. ನಿಮ್ಮ ಮಾಲೀಕರು ನಿಮ್ಮನ್ನಂದ್ರೆ ಅಷ್ಟು ವಿಶ್ವಾಸವಿಟ್ಟಿದ್ರು. ಅವರ ಮನಸ್ಸಿನಲ್ಲಿ ವಿಷ ಚೆಲ್ಲಿದ್ರು ಈ ಇಬ್ಬರು ದುರಾತ್ಮರು. ಅದಕ್ಕೂ ಆಸ್ಪದ ಒದಗಿಸಿ ಕೊಟ್ಟಿದ್ದು ನೀವೇ. ಕೊನೆಕೊನೆಗೇ ನಿಮ್ಮ ತಲೇಮೇಲೆ ಕಲ್ಲು ಹೊರಿಸಿದ್ರು. ಕೆಲಸ ಹೋಯ್ತು, ಮಾನಹೋಯಿತು; ಜೀವನ ಮುಗೀತು. ಸಾಲದ್ದಕ್ಕೆ ಎರಡು ಸಾವಿರ ರೂಪಾಯಿ ದಂಡ ಬೇರೆ. ಇಷ್ಟಾಗಿಯೂ ಕೆಟ್ಟು ಹೋದವರು ನಾವು. ಅವರೇನೋ ರಾಜಾರೋಷಾಗಿ ಅಲೀತಿದ್ದಾರೆ.

ಮು:— ಹೋಗಲಿ ಬಿಡು ಸೀತಾ ! ಸತ್ಯಕ್ಕೆಂದಿದ್ರೂ ಜಯ ವಿದ್ದೇ ಇದೆ.

ಸಿ:— ನೀವು ಯಾವಾಗಲೂ ಹೀಗೇ. ಅಲ್ಲಾಂದ್ರೆ ! ಏನೋ ಒಳ್ಳೆದೂಂತ ಕಂಡು ಬಂದದ್ದು ಎರಡು ಮಾತು ಹೇಳಿದರೆ ಅದನ್ನು ಕೇಳ್ಕೊಳ್ಳೋದಕ್ಕೂ ನಿಮಗೆ ಬೇಡವಾಗಿದೆಯಲ್ಲಾ.

ಮು:— ಸೀತಾ ! ನಾವು ನ್ಯಾಯವಾಗಿ ನಡೆಕೊಳ್ಳೋವರೆಗೂ ದೇವರು ಹೇಗಾದ್ರೂ ಕಾಪಾಡ್ತಾನೆ.

ಸೀ:— ಅದು ಸರೀಂದ್ರೆ ! ನಿಮ್ಮ ಒಳ್ಳೇತನ ಬಿಟ್ಟುಬಿಡಬೇಕೂಂತ ನಾನು ಹೇಳ್ತಾ ಇಲ್ಲ. ಆದರೂ ವ್ಯವಹಾರದಲ್ಲಿ ಮಟ್ಟಿಗೆ ಸ್ವಲ್ಪ ಮುಂದಾಲೋಚನೆ ಇರಬೇಕು. ಒಳ್ಳೇದು ಕೆಟ್ಟದ್ದು – ಎಲ್ಲಾದರಮೇಲೂ ದೃಷ್ಟಿ ಇರಬೇಕು. ಇಲ್ಲದಿದ್ದರೆ ಹೀಗೇ... ....ಅನರ್ಥಗಳು........

(ಪ್ರವೇಶ: ಲಲಿತ)

ಲಲಿತ:— ಅಪ್ಪಾ ! ಅದ್ಯಾರೋ ಕೋರ್ಟಿನವರಂತೇ. ಬಾಗಿಲಲ್ಲಿ ಕಾದಿದ್ದಾರೆ. ನಿಮಗೇನೋ ಸಮನ್ಸ್ (Summons) ತಂದಿದ್ದಾರೆ.

ಮು:— ಹೂಂ ! ಈ ಅವಾಂತರಗಳಿಂದ ಎಂದಿಗೆ ಬಿಡುಗಡೆಯೋ ಗೊತ್ತಿಲ್ಲ ವಲ್ಲಾ. (ಎಂದುಕೊಂಡೇ ಬೀದಿ ಬಾಗಿಲಿಗೆ ಹೋಗಿ ಸಮನ್ಸ್ ತೆಗೆದುಕೊಳ್ಳುವನು)

ಸೀ:—(ಸ್ವಗತ) ವಿಷಘಳಿಗೆ! ಗ್ರಹಚಾರದಮೇಲೆ ಗ್ರಹಚಾರ! ಯಾರಿಂದ ತಡೆಯೋಕಾಗುತ್ತೆ? (ಪ್ರಕಾಶ) ಲಲಿತಾ! ಶ್ಯಾಮಲೆ ಬಂದಳೇನೇ ಸ್ಕೂಲಿನಿಂದ? ಅವನೋ, ಆನಂದು?

ಲಲಿತ:—ಇಬ್ಬರೂ ಬಂದ್ರಮ್ಮಾ. ಪಕ್ಕದ ಮನೇಲಿ ಆಡ್ತಾ ಇದ್ದಾರೆ.

ಸೀ:—ಇವತ್ತು ಅಡಿಗೇ ಕೆಲಸ ನೀನೇ ನೋಡ್ಕೋಮ್ಮ ಸ್ವಲ್ಪ. ನನಿಗ್ಯಾಕೋ ಸ್ವಸ್ಥವಿಲ್ಲ.

ಲಲಿತ:—ಆಗಲೀಮ್ಮಾ. (ಹೊರಡುವಳು)

(ಪ್ರವೇಶ: ಮುಕುಂದ: ಸಮನ್ಸನ್ನು ಹಿಡಿದು)

ಸೀ:—ಯಾವುದದು?

ಮು:—ಸೀತಾ! ಏನೆಂದು ಹೇಳಲಿ ಈ ಗ್ರಹಚಾರಕ್ಕೆ? ಆ ರಾಘವಯ್ಯನವರ ಮಗಳ ಮದುವೆ ಸಮಯದಲ್ಲಿ ಒಂದು ಸಾವಿರಕ್ಕೆ ಜಾಮೀನಾಗಿರಲಿಲ್ಲವೆ?

ಸೀ:—ಅದೇನೋ ಯಾರು ಕಂಡವ್ರು? ನೀವು ಹೇಳಿದ್ರೇನು ಹೀಗೇಂತ? ಹೂಂ!

ಮು:—ಆತ ಸತ್ತು ಹೋದಮೇಲೆ ಬಾಕಿ ನಿಂತ ಐನೂರಕ್ಕೆ ಬ್ಯಾಂಕಿನವರು ನನ್ನ ಮೇಲೆ ದಾವಾ ಹೂಡಿದ್ದಾರೆ.

ಸೀ:—ಇದಕ್ಕೆಷ್ಟು ಬೇಕಾಗುತ್ತೋ ಇನ್ನು?

ಮು:—ಎಷ್ಟಾದರೂ ಆಗಲಿ; ಬಂದದ್ದು ಬರಲಿ; ಅನುಭವಿಸಿಬಿಡೋದು ಅತ್ಲಾಗೆ.

ಸೀ:—ಸರಿ; ಇನ್ನು ನಾವು ಹೆಸರು ಹೇಳಿ ಬಾಳಿದ ಹಾಗೆಯೇ ಆಯಿತು. ಇನ್ನ್ಯಾವುದೋ ಒಂದು ಹೇಳಿದ್ರಲ್ಲಾ ಆ ೧,೩೦೦ ಚಿಲ್ಲರೆ–ಇನ್ನೊಂದು ಬ್ಯಾಂಕಿಂದು? ಅದೇನಾಯ್ತೋ?

ಮು:—ಆಗುವುದೇನು? ಅದಕ್ಕೂ ಬರುತ್ತೆ ಸಮನ್ಸ್ ಇಷ್ಟರಲ್ಲೇ. ಅವರೂ ನಾಕಾದಷ್ಟು ತಡೆದರು. ಇನ್ನೆಷ್ಟು ಕಾಲ ತಡೀತಾರೆ?

ಸೀ:— ಅದೊಂದು ಜಾಮೀನು! ಬೇಡಾಂದೆ. ಈ ಜಂಟಿ ಸಾಲಗಳಿಗೆ ತಲೆ ಕೊಡಬೇಡೀಂದೆ. ಕೇಳಿದರಲ್ಲವೆ ?

ಮು:—ಸೀತಾ ! ಜಂಟೀ ಸಾಲವಲ್ಲ. ಜನ್ಮಾಂತರ್ಯದ ಸಾಲಗಳು ! ಆದಷ್ಟು ತೀರಿಸಿ ಬಿಡೋದು. ಸಾಲದ್ದಕ್ಕೆ ಇನ್ನೊಂದು ಜನ್ಮದಲ್ಲಿ ತೀರಿಸೋದು ಅಷ್ಟೆ !

ಸೀ:—ಹಾಗೇ ಮಾಡೀಂದ್ರೆ. ಈಗ ಸದ್ಯ ಬಂದಿರೋ ಕಷ್ಟಗಳು ನಿವಾರಣೆ ಯಾಗಲಿ. ಆಮೇಲಲ್ಲವೆ ಇನ್ನೊಂದು ಜನ್ಮದ ಯೋಚನೆ ?



ದೃಶ್ಯ ೮ ] [ ಸ್ಥಾನ : ಬೀದಿ.

( ಪ್ರವೇಶ : ರಾಮನಾಥ ಪಂಡಿತ್ )

ರಾ:—(ಸ್ವಗತ) ಹಾಗೂ ಹೀಗೂ ಜೂಜಿನ ಹುಚ್ಚು ಹೆಚ್ಚಿತು. ನಷ್ಟ ಮಾಡಿಕೊಂಡ ಹಣ ಅಷ್ಟಿಷ್ಟಲ್ಲ. ಇದರಲ್ಲಿ ಕಷ್ಟಗಳು ಯಥೇಚ್ಛವಾಗಿ ನನ್ನ ಬಾಳೂ ಹಾಳಾಯಿತು. ಸಾಲಗಾರರ ಹಾವಳಿ ಹೇಳಿತೀರದು. ಮನೇಲಿ ನೋಡಿದ್ರೆ ತಿಂಡಿಗೇ ಗತಿಯಿಲ್ಲದಂತಾಯ್ತು. ಸಂಬಳ ನೋಡಿದ್ರೆ150/–ರೂ. ಆದ್ರೂ ನನ್ನ ಗತಿ ಹೀಗಾಗಬಹುದೇಂತ ?ಹೂಂ ! ಜೂಜು ಸಾಮಾನ್ಯವೇ ? ಆ ರಾಮಕೃಷ್ಣಯ್ಯ—ಲಕ್ಷಾಧೀಶ್ವರ - ಈಗ ತಿರುಪೆ ಮಾಡಿ ಜೀವಿಸೋದು ಜೂಜಿನ ಮಹಿಮೆಯಿಂದಲೇ ಇಲ್ಲವೆ ? ಎಂಥೆಂಥಾವರ ಗತಿಯೋ ತಲೆಕೆಳ ಗಾಯಿತಂತೆ ಜೂಜಿನ ಪ್ರಭಾವದಿಂದ ! ಇನ್ನು ನನ್ನಂಥವನ ಪಾಡೇನು ? ನನಗೂ ಭಿಕ್ಷಾಟನದ ಗತಿ ಬಂದುಬಿಟ್ಟಿದೆ. ತಪ್ಪಿದರೆ ಜೈಲು ಸಿದ್ಧವಾಗಿದೆ.

ಇದೊಂದು ಕಡೆ ಇರಲಿ. ಈಗ ಆಫೀಸಿನಲ್ಲಿ ಒಟ್ಟು 16,000ರೂ. ಛಪಾವಣೆಯಾಗಿ ಹೋಗಿದೆ. ಇದಕ್ಕೆ ಯಾರು ಜವಾಬು ಹೇಳುವವರು ? ರಘುವೀರನಂತೂ ಮೊದಮೊದಲು ಧಾರಾಳವಾಗಿ ಪ್ರೋತ್ಸಾಹ ಕೊಟ್ಟ. ಮುಕುಂದರಾಯರೂ ಆಗಿಂದಾಗ್ಗೆ "ಈ ಜೂಜು ಅಭ್ಯಾಸ ಒಳ್ಳೆಯದಲ್ಲ" ಅಂತ ಎಚ್ಚರಿಸುತ್ತಲೇ ಇದ್ರು. ನನ್ನ ಹೆಂಡತಿ ಇದಕ್ಕೆ ತಡೆಮಾಡಿದ್ದು ಅಷ್ಟಿಷ್ಟಲ್ಲ. ಆದರೂ ಗ್ರಹಚಾರ ! ಯಾರು ತಡೆಯೋಕ್ಕಾಗುತ್ತೆ ? ಹೂಂ! ನನ್ನ ತಲೇಮೇಲೆ ಹಣದ ಜವಾಬ್ದಾರಿ ಬಿತ್ತು. ಆ ಮಹಾರಾಯ ರಘು ವೀರ – ಏನೇನೋ ನಂಬಿಕೆ ಮಾತು ಹೇಳಿಬಿಟ್ಟು – ಒಂದು ತಿಂಗಳು ರಜಾ ತೆಕ್ಕೊಂಡು—ಒಂದು ಸಾವಿರ ರೂಪಾಯಿಯನ್ನೂ ಕೈಯಲ್ಲಿಟ್ಟುಕೊಂಡು ನಡೆದ - ಬೊಂಬಾಯಿಗೆ. " ನೀನು ಹೆದರಬೇಡಯ್ಯಾ ರಾಮನಾಥ್ ! ಈ ಸಲ ಬಾಂಬೇ ರೇಸೆಸ್‌ನಲ್ಲಿ ಒಂದು ಸರಿಯಾದ ಚಾನ್ಸ್ (Chance in Bombay Races) ನೋಡಿಬಿಡ್ತೇನೆ. ದರಿದ್ರಪಕ್ಷ ಒಂದು ಮುವತ್ತು ಸಾವಿರವಾದ್ರೂ ಬರತಾ ಕೈಯಲ್ಲಿ ಹಿಡಿದುಕೊಂಡು ಬರ್ತೀನಿ. ಆಫೀಸ್ ಹಣವೆಲ್ಲಾ ಭರ್ತಿಹಾಕಿಬಿಡೋಣ. ನೀನು ಸ್ವಲ್ಪ ಹುಷಾರಾಗಿಯೇ ಇರ ಬೇಕು" ಅಂತ ಭರವಸೆ ಹೇಳಿಬಿಟ್ಟುಹೋದ. ಅವನು ಹೋಗಿ ಇಂದಿಗೆ

ಇಪ್ಪತ್ತು ದಿವಸವಾಯಿತು. ಇಲ್ಲಿಯೋ ಲೆಖ್ಖಪತ್ರಗಳ ತನಿಖೆ ಬೇರೆ ನಡೀತಾ ಇದೆ. ಆಫೀಸಿನಲ್ಲಿ ಯಾವ ಘಳಿಗೆ ಹೇಗೋಂತ ಎದೆ ಡಬ್‌ಡಬ್ ಅಂತ ಹೊಡಕೋತಾ ಇದೆ. ಇದರಲ್ಲಿ ಆ ಸಾಧು ಬೇರೆ ಅವತ್ತು ಕೈನೋಡಿ ಹೇಳಿದ "ಸ್ವಾಮಿ ! ಇದೇನೋ ನೋಡಿ"...........ಅಂತ ಸ್ವಲ್ಪ ಅನುಮಾನವಾಗಿ ಹೇಳಿದ. ನಾನು "ಏನು ಸಾಧುಗಳೇ ! ಮುಚ್ಚುಮರೆ ಬೇಡ. ಹೇಳಿ ಬಿಡೀ"ಂದೆ. ಅದಕ್ಕಾತ " ತಮ್ಮ ಕೈನೋಡಿದರೆ ಶೀಘ್ರದಲ್ಲಿಯೇ ಕಾರಾಗೃಹವಾಸದ ಪ್ರಾಪ್ತಿ ಕಾಣ್ತಾ ಇದೆಯಲ್ಲಾ ಸ್ವಾಮಿ !" ಅಂತಂದ. ಹೂಂ ! ಅದೇನೂ ಸುಳ್ಳಲ್ಲ.

ಈ ಮಧ್ಯೆ ರಘುವೀರನು ಬೊಂಬಾಯಿಗೆ ಹೋದಲಾಗಾಯ್ತು ಅವನಿಂದ ಒಂದು ಕಾಗದವಿಲ್ಲ. ಅವನು ಬದುಕಿದ್ದಾನೋ ಅಥವಾ ಈ ಅವಮಾನ ಯಾಕೇಂತ ಅರಬ್ಬೀಸಮುದ್ರದಲ್ಲಿ ಮುಳುಕ್ಕೊಂಡನೋ ? ಯಾರು ಕಂಡವ್ರು ? ಹಾಗೂ ಅವನು ಬದುಕಿದ್ರೆ ಅದೇನು ತರ್ತಾನೋ ಬಿಡ್ತಾನೋ ದೇವರೇ ಬಲ್ಲ. ಅಂತೂ ಜೂಜು ಅನ್ನೋದು ಒಂದು ಕಳ್ಳ ಕನಸಾಯಿತು. ಏನೋ ಹಣವಂತರು ಜೂಜಿಗೆ ಹೋಗಿ ಅಲ್ಪಸ್ವಲ್ಪ ವಿಹಾರಾರ್ಥವಾಗಿ ಹಣಕಳಕೊಂಡು ಮನೆಗೆ ಬಂದ್ರೆ - ಏನೂ ದಿಕ್ಕಿಲ್ಲದ ನನ್ನಂಥಾವ್ರು ಅವರನ್ನನುಕರಿಸಿ ಆಫೀಸು ಹಣ ತಕ್ಕೊಂಡು ಹೋಗಿ ಜೂಜಿನಲ್ಲಿ ಹಾಕೋದೂಂದ್ರೆ ಇದೆಂಥಾ ಮುಟ್ಠಾಳತನ ? ಹಾಂ ! ಈಗ ನನಗೆ ತೋರೋ ವಿವೇಕ ಮೊದಲೆಲ್ಲಿ ಮಾಯವಾಗಿತ್ತೊಂತ ?

ಹೇಗೋ ನಾನೂ ಒಬ್ಬೊಂಟಿಗನಾದೆ. ರಘುವೀರ ತಲೆತಪ್ಪಿಸಿಕೊಂಡ. ಕಂಪೆನಿ ಲೆಖ್ಖಪತ್ರಗಳ ತನಿಖೆಯಾದ್ರೆ ಮುಕುಂದರಾಯರು ನಿರಪರಾಧೀಂತ ಹೊರಬೀಳುತ್ತೆ. ಅಲ್ಲದೆ ನಮ್ಮಿಬ್ಬರಿಗೂ ಕಾರಾಗೃಹ ಕಾದಿದೆ. ಮ್ಯಾನೇಜರ್ ಮುಕುಂದರಾಯರಿಗೆ ನಾವಿಬ್ಬರೂ ಮಾಡಿದ ದ್ರೋಹ ನಮ್ಮನ್ನು ದಹಿಸದೇ ಬಿಡೋದಿಲ್ಲ. ಅಂತೂ ಕಲಿಗಾಲದಲ್ಲಿ ಆಗಿಂದಾಗ್ಗೆ ಆಗಿ ಹೋಗುತ್ತೆ ಅಕೃತ್ಯಗಳಿಗೆ ಶಿಕ್ಷೆ ! ಈಗೇನು ಮಾಡಲಿ ? ಯಾವುದಾದ್ರೂ ಸ್ವಲ್ಪಮಟ್ಟಿಗಾದ್ರೂ ಹಣ ಜೊತೆ ಮಾಡದಿದ್ದರೆ ವಿಧಿಯಿಲ್ಲ. ಓಹೋ – ಸಾಹುಕಾರ ಪಾಂಡುರಂಗರಾಯ ಬರ್ತಾ ಇದ್ದಾನೆ. ಅವನನ್ನೂ ಸ್ವಲ್ಪ ಲಘು ಬಿಗು ನೋಡಿ ಪ್ರಸ್ತಾಪಿಸಿಬಿಡ್ತೀನಿ, ಇರಲಿ.

(ಪ್ರವೇಶ:—ಪಾಂಡುರಂಗ ಮತ್ತು ಉಡುಗರೆಯನ್ನು ಒಂದು ತಟ್ಟೆಯಲ್ಲಿ ಹಿಡಿದು ನಾರಾಯಣ ಇದಿರಾಗಿ ಬರುವರು)

ನಾ:—ಬುದ್ಧಿ ! ಒಸಿ ನಿಧಾನಮಾಡಿ. ಮುಂದ್ಹೋಗ ಬೇಡಿ. ಒಂಟಾಗಲೇ ಒಂದು ಬೆಕ್ಕು ಅಡ್ಡಲಾಗಿ ಬತ್ತು. ಓದರೋಯ್ತುದೇಂದ್ರೆ ಈ ಆರು ವಯ್ಯ ಬೇರೆ ಎದುರಿಗೆ ಬತ್ತವನಲ್ಲಾ ಒಂಟಿಸಂಟಿಯಾಗಿ. ಸಕುನ ಸಂದಾಗಿಲ್ಲ. ತಡೀರಿ ಬುದ್ಧಿ !

ಪಾಂ:—ಎಲ್ಲಾ ಪ್ರಾರಬ್ಧಗಳಿಗೂ ಈಗಲೇ ಅವಸರವಾಗಿತ್ತೇ?

ರಾ:—(ಪಾಂಡುರಂಗನನ್ನು ನೋಡಿ) ನಮಸ್ಕಾರ ! ಪಾಂಡುರಂಗರಾಯರೇ ! ಎಲ್ಲಿಗೆ ದಯಮಾಡಿಸ್ತಾ ಇದ್ದೀರಿ ಸ್ವಾಮಿ?

ಪಾಂ:—ಹೂಂ ! (ಎಂದು ಮುಖವನ್ನು ಗಂಟಿಕ್ಕುವನು )

ನಾ:—(ಸ್ವಗತ) ಪ್ರಸ್ನೇನೂ ಅನುಕೂಲವಾಗೇ ಐತೆ ಸಕುನಕ್ಕೆ !

ಪಾಂ:—ಇಲ್ಲಾ, ಹೀಗೇ ದೇವಸ್ಥಾನಕ್ಕೆ ಹೋಗಿ ಅಮ್ಮನವರ ದರ್ಶನಮಾಡಿಕೊಂಡು ಬರೋಣಾಂತ ಹೊರಟೆ.

ರಾ:—ತಮ್ಮನ್ನೇ ಕಂಡುಬಿಟ್ಟು ಹೋಗೋಣಾಂತ ಹೊರಟುಬಂದೆ. ತಾವೇ ಇದಿರಿಗೆ ಬಂದರಲ್ಲಾ. ಅದೇ ಆ ವಿಚಾರ............... ಸ್ವಲ್ಪನಿಂತುಕೊಂಡ್ರೆ ಹಾಗೇ ಹೇಳಿ ಬಿಡ್ತೀನಿ.

ಪಾಂ:—ಈಗ ನಿಲ್ಲೋದಕ್ಕೆ ಅವಕಾಶವಿಲ್ಲ. ಅದರಲ್ಲೂ ಹಣದ ಸಮಾಚಾರ ವಿನಾಯಿಸಿ ಬೇರೆ ಯಾವುದಾದ್ರೂ ಇದ್ರೆ ಬೇಗ ಹೇಳಿ.

ರಾ:—ಆಗಲೀಂದ್ರೆ ! ತಾವೆಲ್ಲೋ ಹೊರಟಿದ್ದೀರಲ್ಲಾ ! ದಯಮಾಡಿಸಿ. ವಿರಾಮವಾಗಿ ಬಂದು ಕಾಣಿಸಿಕೊಳ್ತೀನೆ.

(ಹೊರಡುವನು)

ಪಾಂ:—ಜೂಜುಕೋರು ಮುಂಡೇವು ! ಸಾಲಮಾಡೋದು – ಜೂಜಿನ ಬಾಯಲ್ಲಿ ಅತ್ತುಬಿಡೋದು. ಏನೋ ಹಾಕ್ತಾ ಇದ್ದಾನೆ ಪ್ಲಾನು, ಹಾಳಾದವನು. ನನ್ನ ಹಣ ಅಷ್ಟು ಕರಗಿಸಬೇಕೂಂತು· ಕಂಡಕಂಡ ಕಡೇಲಿ ಸಿಕ್ಕಾಪಟ್ಟೇ ಸಾಲಾ ಮಾಡಿಬಿಟ್ಟು ಹೀಗೆ ಬೀದಿಬೀದಿಲಿ

ಅಲೀತ್ವಿ ! ಅಲ್ಲ, ಅದು ಹೋಗಲಿ. ನಾನು ಹೊರಟರೋದು ಮದುವೆ ನಿಶ್ಚಯಮಾಡೋಕೇಂತ. ಈ ಪ್ರಾರಬ್ಧಗಳು ಹೀಗೆ ಎದುರಿಗೆ ಬಂದು ಅಪಶಕುನ ಮಾಡೋದೇಂತ ?

ನಾ:—ಬುದ್ಧಿ ! ಮತ್ತ್ವರತಾವಾ ದೇವಸ್ಥಾನಕ್ಕ್ಯೋಯ್ತೀನೀಂತಂದ್ರಲ್ಲಾ ?

ಪಾಂ:—ಅಲ್ಲವೋ ನಾರಾಯಣ ! ಈ ಹೆಣಮುಂಡೇದರ ಹತ್ತಿರ ಮದುವೆ ಮಾತು ಹೇಳೂಂತ್ಲೇನೋ ನೀನು ಹೇಳ್ತಾ ಇರೋದು ?

ನಾ:—ಸರಿ ಬುದ್ಧಿ ! ಒಪ್ಪಿಕೊಂಡೆ.

ಪಾ:ಂ—ಅಲ್ಲ, ಎದುರಿಗೆ ಒಬ್ಬೊಂಟಿಗನಾಗಿ ಬಂದದ್ದೂ ಸಾಲದೆ, 'ಎಲ್ಲಿಗೆ ಹೋಗ್ತೀಯಾ' ಅಂತ ಬೇರೆ ಕೇಳ್ಬಿಟ್ನಲ್ಲಾ ! ಹಾಂ ! ಅಪಶಕುನ ! ಎಲ್ಲಾ ಗ್ರಹಚಾರ !

ನಾ:—ಆದೋಯ್ತದೆ ಬುಡಿ ಬುದ್ಧಿ ! ಅದಿರಲಿ. ನಾನವತ್ತೇ ಏಳ್ಲಿಲ್ಲವ್ರಾ ತಮಗೇ ? ಒಳ್ಳೆ ಡಿರೆಸ್ ಗಿರೆಸ್ ಆಕ್ಕೊಂಡು ತಾವು ಒಂಟುಬುಟ್ರೆ ತಮ್ಮೊಕದಾಗೆ ರಾಜಕಳೆ ಕಾಣ್ತೈತೇ ಬುದ್ಧಿ ! ರೋಟಾಗೋಗೋ ವ್ರೆಲ್ಲಾ ತಮ್ನೇ ನೋಡ್ತಾರೇ ಬುದ್ಧಿ !

ಪಾಂ:—ಹಾಗಾದ್ರೆ ನಾನೀಗ ಕಮ್ಮಿ ವಯಸ್ಸಿನವನಹಾಗೆ ಕಾಣ್ತೀನೇನೋ?

ನಾ:—ಅಲ್ಲವ್ರಾ ? ಅದರಾಗೂ ಚೌರಾಗೀರಾ ಮಾಡುಸ್ಬುಟ್ರೆ ಪತ್ತೇಸಿಕ್ಕೋಕ್ಕಿಲ್ಲ. ಅಂಗೂ ತಮಗೇನಂತೇ ವಯಸ್ಸು ಕೊಳ್ಳೇ ಓಸ್ದು ಬುಡಿ ಬುದ್ಧಿ ! ತಮ್ಮನ್ನ ನೆಗ್ನ ಆಗೋಕೆ ಕೇಳಿ ಬಂದಿರ್ಬೇಡವ್ರಾ ? ಅಂಗೂ ನೆಗ್ನಾ ಆಗೋವ್ರು ತಮ್ಜೊತೆ ಏಡುದಿನ್ನಾ ಬಾಳಿದ್ರೂ ಸಂದಾಗಿ ಬಾಳ್ತಾರೆ. ಇದರಮೇಕ್ಕೆ ತಮಗೇನಾರಾ ಆಣಾ ಕಮ್ಮಿಯಾಗೈತಾ ? ಇದಿರಾಗಿನ್ನೊಂದು ಸಮಾಚಾರಾ ಬುದ್ಧಿ ! ತಮ್ಗೆತಾವ ಏಳ್ಬೇಕೊಂತ ; ಮರೆತೋಯ್ತಾನೇ ಐತೆ.

ಪಾಂ:—ಲೋ, ನಾರಾಯಣ ! ಅಪಶಕುನವಾಗಿದ್ರೆ ಆಮೇಲೆ ಹೇಳು. ತಿಳೀತೇ ?

ನಾ:—ಅಪಸಕುನಾಂತ ಅಲ್ಲವ್ರು. ಅದರಾಗೂ ಏಳಬೋದೋ ಬೇಡವೋಂತ? ಏಳ್ಬ್ಯಡ ಬೇಕೂಂತ ಮನಕಾಡ್ತೈತೆ. ಏಳೂಂತಂದ್ರೆ ಏಳ್ಬುಡ್ತೀನಿ ಬುದ್ಧಿ !

ಪಾಂ:—ಅದೇನದು ಹೇಳಿಬಿಡೋ ಅತ್ತಲಾಗೆ.

ನಾ:—ಬುದ್ಧಿ ! ಒರಗ್ಯೋರ ಮಾತು. ಆಮೇಕ್ಕೆ ನಾರಾಯಣ ಇಂಗೆಲ್ಲಾ ಅಂದ ಅಂತ ನನ್ನ ಮೇಲ್ ಸಿಟ್ಟುಮಾಡಿಕೊಂಡ್ರೆ ?

ಪಾಂ:— ನ್ಯಾಯವಾಗಿದ್ರೆ ಸಿಟ್ಟು ಯಾತಕ್ಕೋ ? ನಡೆದದ್ದು ನಡೆದ ಹಾಗೆ ಹೇಳು. ಮರೆಮಾಚಬೇಡ.

ನಾ:—ಬುದ್ಧಿ ! ಆ ಸೀರೆ ಎಲ್ಲಾ ತತ್ತಾರೋಂತ ಚೀಟಿ ಕೊಟ್ಟು ಕಳಿಸಿದ್ರಲ್ಲಾ ಆ ಸಂಗಪ್ನೋರ ಅಂಗಡೀಗೆ. ನಾ ಓದ್ದೇ ತಡ, ಚೀಟಿ ಕೊಟ್ಟೆ. ಕೊಟ್ಟೇಟಿಗೆ ತೆಕ್ಕೊಂಡ್ರು. ತೆಕ್ಕೊಂಡವ್ರು ಕುಂತುಕೋಪ್ಪ ಅಂದ್ರು. ಕುಂತ್ಕೊಂಡೆ. (ತಟ್ಟೆಯನ್ನು ಕೆಳಗಿಟ್ಟು ಅಭಿನಯಿಸುವನು.)

ಪಾಂ:—ಲೋ ನಾರಾಯಣ !

ನಾ:—ಬುದ್ಧಿ !

ಪಾಂ:—ನಿನ್ನ ಮೊಖಕಷ್ಟು ಬೆಂಕಿ ಹಾಕಿದ್ರು.

ನಾ:—ಇದ್ಯಾಕ ಬುದ್ಧಿ ! ಬೊಯ್‌ತಿದ್ದೀಯರ್ಾ ?

ಪಾಂ:—ಇದೇನೋ ಈ ಅವತಾರ ?

ನಾ:—ಅದೇ ಬುದ್ಧಿ ! ನಡೆದದ್ದು ನಡೆದಂಗೆ ಏಳೂಂತ ಅಪ್ಪಣೆ ಮಾಡಿದ್ರಿ.

ಪಾಂ:—ಅಲ್ಲವೋ, ಅದೇನೋ ಹೇಳ್ದೀನೀಂದೆ. ಹೇಳೂತಂದೆ. ಇದೇನೋ ನಾಟ್ಯ ಇದು ? ''ಹೋದೆ - ಕೊಟ್ಟೆ-ಕೂತುಕೋಂದ್ರು-ಕೂತ್ಕೊಂಡೆ. ನಿಂತುಕೊಂಡೆ '' ನಿನ್ನ ತಲೆ ! ಇದೇನೋ ಈ ಪುರಾಣಾ ?

**ನಾ:—ಅದ್ಕೇ ಬುದ್ಧಿ ! ಸಿಟ್ಟು ಮಾಡ್ತಿರೇನೋಂತ ಮೊದಲೇ ಕೇಳಿದ್ದು. ಏನೂ ಮರೆಮಾಚಬೇಡಾಂತ ಬೇರೆ ಅಪ್ಪಣೆಯಾಗಿತ್ತಲ್ರಾ !**

ಪಾಂ:—ಅದಕ್ಕೇನೋ ಈ ನಾಟ್ಯ, ಈ ಅಭಿನಯ! ಅಹಹ! ಎರಡು ಕಣ್ಣು ಸಾಲ್ದೋ ನಿನ್ನ ಅವತಾರ ನೋಡೋದಕ್ಕೆ! ಹೂಂ! ಮುಂದೆ ಹೇಳು.

ನಾ:—ಅದೇ ಬುದ್ಧಿ! ಚೀಟಿಕೊಟ್ಟಮೇಲೆ ಓದ್ಕೊಂಡ್ರು. ಕುಂತ್ಕೊಂದ್ರು. ಕುಂತ್ಕೊಂಡೆ. ಎಲ್ಲಾ ಎತ್ತಿ ಮಡಗಿದ್ರು—ಸೀರೆ-ಗೀರೆ - ಕುಪ್ಪಸಾ-ಎಲ್ಲಾನೂವೆ. ಆಮೇಕ್ಕಿದ್ಕೊಂಡು ಅದೋನೋ ಸಂಸಯ ಬತ್ತೂ ಬುದ್ಧಿ! ಅವರಿಗೆ. ಇದಕ್ಮುಂಚೆ ನಾಓದ-ಗೀದವನಲ್ಲ ಅವರಂಗಡೀಗೆ; ನನ್ನೋಡಿದ ನೆಪ್ಪೂ ಇಲ್ಲ ಅವರಿಗೆ. ಆಮೇಕಿದ್ಕೊಂಡು ಕ್ವೆಚ್ಚ್ನ ಮಾಡಿದ್ರು ಬುದ್ಧಿ ನನ್ನ.

ಪಾಂ:—ಏನೂಂತ?

ನಾ:—ಅದೇ ಬುದ್ಧಿ! 'ನೀನು ಯಾರು?' ಅಂತ ಕೇಳಿದ್ರು.

ಪಾಂ:—ಆಮೇಲೆ?

ನಾ:—ನಾನಂದೆ. ಅಗೊಳ್ಳಿ ಬುದ್ಧಿ! ನಿಮ್ಮ ಕೈಯಾಗೇ ಐತಲ್ಲಾ ಚೀಟಿ. ಟಸ್ಸೆ ಒತ್ತಿಲ್ಲವ್ರಾ ಅದರಾಗೆ ನಮ್ಮೆಜಮಾನರದು? ಅಂಗಿದ್ದೂ ನನ್ನೇ ಕೇಳ್ತಿದ್ದೀರ್ಯಲ್ಲಾ?' ಅಂತ. ಅಂಗೂ ಕೇಳ್ದೆ. ನಾನೇನಂತೇ ಕಳ್ಳ ಗಿಳ್ಳನಲ್ಲಾ ಬುದ್ಧಿ! ನನ್ನೀವು ಸಿಕ್ಕಾಪಟ್ಟೇ ಕ್ವೆಚ್ಚ್ನಮಾಡೋಕೆ! ಸಂಬಳ ಕೊಡೋ ದಣಿಗೋಳೂ ಇಂಗೆ ಮಾತಾಡ್ಸಾಕಿಲ್ಲ ಅಂತಂದೆ. ಆಮೇಕಿದ್ಕೊಂದು ಅದೇನು ಬರೆದವ್ರೋ ಚೀಟಿಯಾಗೆ ಅದ್ನೊಸಿ ಸರಿಯಾಗಿ ಓದ್ಕೊಂಡು ಕೊಡ್ರಿ ಎಲ್ಲಾನೂವೆ? ಆಮೇಕ್ಕೇನಾರಾ ಬುಟ್ಬುಗಿಟ್ಕೋದ್ರೆ ಯತ್ವಾಸ ಬಂದ್ಬುಡ್ತೈತೆ ಅಂದೆ. ಅದಕವರಂದ್ರು 'ಅದಕ್ಕಲ್ಲವೋ ಮಾರಾಯಾ! ಅವರ ಮನೆಯಾಗೆ ಎಂಗ್ಸೂ ಮಕ್ಕಳೂ ಇಲ್ಲವಲ್ಲಾ? ಯಾತ್ಕೀ ಸೀರೆ ಕುಪ್ಸಾಲ್ಲಾ? ಅಂತ.

ಪಾಂ:—ಹಾಂ! ಹಾಗಂತ ಕೇಳಿದ್ರಾ?

ನಾ:—ಔದೂ ಬುದ್ಧೀಂತಂದ್ರೆ! ತಮ್ ಪಾದದಾಣೆಗೂ!

ಪಾಂ:—ನೀನೇನಂದೆ ಅದಕ್ಕೆ ?

ನಾ:—ಅದಕ್ಕಾನಂದೆ 'ಬುದ್ಧಿ! ಅಷ್ಟೊ ಒಂದು ಪಕ್ಸ ಕಾಣ್ಸಿರಬೋದೂ ಚೀಟಿಯಾಗೆ; ಸರಿಯಾಗಿ ನೋಡಿ ಬುದ್ಧಿ' ಅಂದೆ. 'ಅದೆಲ್ಲಾ ಕಾಣಿ ಸ್ಲಿಲ್ಲಾ ಅವರೂಂತಂದ್ರು'.

ಪಾಂ: —ಆಮೇಲೆ ?

ನಾ:—ಅವರು ಕೇಳಿದ್ರೂ ಬುದ್ಧಿ! 'ನಿಮ್ಮೆಜಮಾನ್ರು ನೆಗ್ನ ಆಯ್ತಾ ರಾ? "ಂತ ಇವರಿಗೆಂಗೆ ತಿಳೀತು ಈ ಸಮಾಚಾರಾಂತ ಮೊದಲು ಯೋಚನೆ ಬತ್ತು. ಆಮೇಕಿದ್ದುಕೊಂಡು ತಾವೇ ಒಂದುಪಕ್ಸ ಅವರ ತಾವಾ ಏಳಿರಬೋದೇನೋಂತ ಅಂದ್ಕೊಂಡು " ಊಂ ಕಾಣ್ಬುದ್ಧಿ! ಅದ್ಯಾಕೆ ? ಏನ್ರೀಮಕ್ಕಳ್ನೆ ಸಾಕ್ಸಾರಾರಾಂತ?'' ಕೇಳ್ದೆ. ಅದಕ್ಕವ್ರು ''ನಾಕೋ ಮಾತಿಗಲ್ಲವಯ್ಯಾ! ಅವರು ಮುದುಕರಾಯಿತಲ್ಲಾ! ಅವರ ಕಾಲಾಲ್ಲಾ ಮುಗೀತಾಬತ್ತು. ಈಗೆಂತೇ ನೆಗ್ನ ಅವರಿಗೇ ?''ಂತ ಕೇಳಿದ್ರು. ಅದ್ಕೊ ಅಂದೇ ಬುದ್ಧಿ ನಾನು 'ಮುದುಕರೂಂತ ಅವರ ಣೇಲ್ಬರದ್ಬೈತಾ ? ಅಂಗೂ ಒಂದು ಪಕ್ಸ ಅವರ್ಮದುವೇ ಆಯ್ತಾ ರೇಂದ್ರೇ ನಿಮ್ಗೆಲ್ಲಾ ನೆಗಸಾರ ಆಯ್ತಾ ? ಅದ್ಯಾಕ್ರೀ ಅಗಬೇಡ್ವಾ? ಕಂಕಣ ಕೂಡಿಬತ್ತೊಂದ್ರೆ ಎಲ್ಲಿದ್ರೂ ಉಡುಕ್ಕೊಂಡು ಬತ್ತೈತೆ" ಅಂತಂದೆ.

ಪಾಂ—ಸರಿ. ಆಮೇಲೇನಾಯಿತೋ ?

ನಾ—ಅದ್ಕಿದ್ಕೊಂದು ಅವರಂದ್ರು "ಅಯ್ಯೋ! ಮಾರಾಯರಾಗಿ ಮಾಡಿ ಕೊಳ್ಳಲಪ್ಪಾ! ಒಂದಿಲ್ಲದಿದ್ರೆ ಅತ್ತು ಮಾಡಿಕೊಳ್ಳಿ. ನಮ್ಮಪ್ಪನ ಮನೆಗಂಟೀನು ಓಪದ್ದು ? ಅಂಗೂ ಯಾರಾರಾ ಮನೆಯಾಗೆ ಮಡ ಕೊಳ್ಳೋಕೆ ಬಾರವಾಯ್ತುದೇಂತ ಎಣ್ಣು ಬಾವೀಲ್ ತೆಳ್ಳಾಕೆ ಬದ್ಲು ಇವರ ಮನೆಯಾಗೆ ತಂದು ತೆಳ್ಳಿದ್ರೆ, ಮಾಡ್ಕೋಬೋದೂಂತಂದ್ರು!

ಪಾಂ—ಹೌದೇನೋ ? ಹಾಗೇಂತಂದ್ರೆನೋ ? ಅಲ್ಲ! ಏನೋ ನಾರಾ ಯಣಾ! ನಿಜವೇನೋ ? ಹಾಂ!

ನಾ:—ಬುದ್ಧೀ ತವ್ಸ್ಪಾದದಾಗ್ಬಿದ್ದಿರೋ ತಾಪೇದಾರ ನಾನು. ಇದರಾಗ್ಸ್ನುಳ್ಳು ಬೇರೇ ಏಳ್ಲಾ ಬುದ್ಧಿ ? ಆಲುಂಡ ಮಕ್ಕಳೀ ಬದಕಾಕಿಲ್ಲ. ಇನ್ನಿಸಾಕುಡು ಜೀವಿಸ್ತವಾ ? ಸುಳ್ಳು ಗಿಳ್ಳಿಲ್ಲ ಬುದ್ಧಿ ! ಅದಿರಲಿ ಅಷ್ಟಕ್ಕೇ ಪೂರೈಸ್ತೂಂತ್ಲಾ ?

ಪಾಂ:—ಹಾಗಾದರೆ ಇನ್ನೇನಂದ್ರೋ ? ಎಲಾ ಇವರ...........ಹಾಂ !

ನಾ:—ಬುದ್ಧಿ ! ಆವ್ಮೇಕಿದ್ಕೊಂದು ಅವರಂದ್ರು 'ನಿಮ್ಮೆಜವಾನ್ರು ಜೋಕಾಲದಿಂದ ಸೇರಿಸಿ ಮಡಗವ್ರೆ ಅಣಾವಾ. ವಾರಸ್ಸು ಗೀರಸ್ಸು ಯಾರೂ ಇಲ್ಲ. ಅಂಗೂ ಮದುವೆ ಆಯ್ತದೋ ಓಯ್ತದೋ ಕಂಡೋರು ಯಾರು ? ಇರೋ ಅಣಾನಾರಾ ಕರ್ಚಾಗಲಿ...........

ಪಾಂ:—ಅಲ್ಲವೋ ನೋಡಿದೆಯ ಮತ್ತೆ ಅಪಶಕುನ ? ಅದು ಬೇಡಾಂದ್ನಲ್ಲೋ ಮೊದಲೇ ?

ನಾ:—ಯಾವುದು ಬುದ್ಧಿ ! ಮದುವೇನೆ ?

ಪಾಂ:—ಥೂ ಹುಚ್ಚುಮುಂಡೆ ! ಅಪಶಕುನ ಕಾಣೋ, ಅಪಶಕುನ !

ನಾ:—ನಾನೆಲ್ಲಿ ಮಾಡ್ದೆ ಬುದ್ಧಿ ಅಪಸಕುನ !

ಪಾಂ:—ಮತ್ತಂದೆಯಲ್ಲೋ ಈಗತಾನೇ ಮದುವೆ ಆಗುತ್ತೋ ಹೋಗುತ್ತೋ ಅಂತ ?

ನಾ:—ನಾನಂದದ್ದಲ್ಲಾ ಬುದ್ಧಿ ! ಅಂದೋವ್ರು ಅವ್ರು 'ಮದುವೇ ಆಯ್ತದೋ ಒಯ್ತದೋ ' ಅಂತ.

ಪಾಂ:—ಹಾ ! ನನ್ನ ಕಂಡರೆ ಇವರಿಗಿಷ್ಟು ತಾತ್ಸಾರವಾಯ್ತೇ ?

ನಾ:—ಅಷ್ಟಕ್ಕೇ ನಿಲ್ಲಿಸ್ನಿಲ್ಲ ಬುದ್ಧಿ ! ಆ ಯಂಗಡಿಯಾಗೆ ಅದ್ಯಾರ್ಯಾರೋ ಸೇರಿದ್ರಲ್ಲಾ – ಅವರಂದ್ರು, "ಡಾರಿ ಆಗೋ ಟೇಮ್‌ನಲ್ಲೂ ಕೂಡ ಏಟೋ ನೆಗ್ನಗೋಳು ತೆಪ್ಪೋಗ್ಬುಟ್ಟವೆ. ಅಂಗಿರಬೇಕಾದ್ರೆ ಈ ಮದುವೇದೊಂದು ನೆಚ್ಚಿಕೆ ಏನಾಕಾಯ್ತದಾ ?" ಅಂತ.

ಪಾಂ:—ಅಲ್ಲ, ಬೇಡಬೇಡಾಂದ್ರೂ ಮತ್ತೆ ಅಪಶಕುನ ! ಹೂಂ ! ಅಯ್ಯೋ ದುರಹಂಕಾರ ಮುಂಡೇವೇ ! ಇವಕ್ಕೇನು ಬಂತು ಹೊಟ್ಟೇಕಿಚ್ಚೂಂತ?

ನಾ:—ನಂಗೂಕೋಪ ಬಂತ್ತು. ಕೇಳ್ಬುಟ್ಟೆಬುದ್ಧಿ—"ಇದೇನ್ರಿ ಬುದ್ಯೋರಾ! ಇದೇನು ನಿಮ್ಮ ಲೇವಡೀಂತ? ನೀವೇಳಿದ್ದೆಲ್ಲಾ ಓಗಿ ತಿಳುಸ್ಬುಡ್ತಾ ನಮ್ಮೆಜವಮಾನ್ರತಾವಾ?" ಅಂತ. ಅದಕ್ಕವ್ರು "ಓಗೋ, ಓಗೋ! ನೀನೂ ಏಳು – ನಾಳೆ ಪೇಪರಾಗೂ ಬತ್ತದೇ - ಸಾವಿರಾರು ಜನಗೋಳಿಗೆ ತಿಳೀತೈತೆ -- ಅಣ್ಣುಮುದುಕರು ಮದ್ವೇಯಾಗಿ ಪರಾಯದ ಉಡ್ಗೀರ ತಲೇಮೇಕ್ಕೆ ಬಂಡೇ ಎಳೀತಾ ಅವ್ರೇಂತ" ಏಳಿದ್ರು....

ಪಾ:—ಅಯ್ಯೋ ಚಂಡಾಲ ಮುಂಡೇವೇ! ಇವಕ್ಕೇನು ಬಂತು ಕೇಡೂಂತ! ನನ್ನ ದುಡ್ಡು ಕರ್ಚುಮಾಡಿ ನಾನು ಮದುವೇ ಮಾಡಿಕೊಂಡ್ರೆ ಇವಕ್ಕೇನು ಆದ ನಷ್ಟಾಂತ? ಹೆಣಮುಂಡೇವು! ಅಲ್ಲ, ದೇವರು ಬಾಯ್ಕೊಟ್ಟಿದ್ದಾನೇಂತ ಬಾಯಿಗೆ ಬಂದದ್ದೆಲ್ಲಾ ಹರಟೆಬಿಡೋದೇ ಹಾಗಾದ್ರೆ? ಇವಕ್ಕೆಲ್ಲಾ ಹೇಳೋವ್ರು ಕೇಳೋವ್ರು ಯಾರೂ ಗತಿ ಇಲ್ದೇ ಹೋಯ್ತೇನೋ? ಹೂಂ! ನೆಗೆದು ಬಿದ್ಹೋಗೋದಕ್ಕೇ ಹೀಗೆಲ್ಲಾ ಆಡೋದು?

ನಾ:—ಬುದ್ಧಿ! ಆ ಮಾತು ಬುಡೀ ಇನ್ನ. ಮುಂದ್ನಡಿಯೋ ಕೆಲಸನೋಡೀ ಬುದ್ಧಿ!

ಪಾಂ:—ಹೋಗಲಿಬಿಡೋ ನಾರಾಯಣ! ಇನ್ನು ನಡಿಯೋ ಹೊತ್ತಾಯಿತು. ರಾಹುಕಾಲ ಬಂದುಬಿಡುತ್ತೆ. ಆಮೇಲೆ ಅದೂ ಒಂದು ಗ್ರಹಚಾರ!

ನಾ:—ನಡೀರಿ ಬುದ್ಧಿ! (ನಾಲ್ಕು ಹೆಜ್ಜೆ ಮುಂದಕ್ಕೆ ಹೋಗಿ) ಅಂಗೇ ಒಸಿ ತಡೀರಿ ಬುದ್ಧಿ! (ಎಂದು ನಿಲ್ಲುವನು)

ಪಾಂ:—ಮತ್ತಿದೇನು ಬಂತೋ ಗ್ರಹಚಾರ? ನಡೀರಿ ಅಂತಂದೆ. ಮತ್ತೆ ತಡೀರಿ ಅಂತ ಹೇಳ್ತಾ ಇದ್ದೀಯಲ್ಲೋ? ಇದೇನೋ ಹುಡುಗಾಟ? ಹಾಂ!

ನಾ:—ಬುದ್ಧಿ! ಕಟ್ಟೆಗೇವ್ರು ಬುದ್ಧಿ! ಏಕ್‌ದಂ ಚಂದಾಗಿಲ್ಲ ಬುದ್ಧಿ ಸಕುನ! ಅಂತೂ ಒಂದೂ, ಎಲ್ಡೂ, ಮೂರಾಯ್ತು - ಅಪಸಕುನ - ಬೆಕ್ಕು -

ಆರುವ - ಕಟ್ಟಿಗೆ. ಒಸಿ ಕುಂತ್ಕೊಳ್ಳಿ ಬುದ್ಧಿ ಅಂಗೆ. ಇನ್ನಿದರ ಮೇಕ್ಕೆ ಮುಕುಂದಪ್ನೋರ ಮನೆಗೋಗೋದಾ ಬುದ್ಧಿ? ನೆಗ್ನ ನಿಕ್ಸಯ ಮಾಡೋಕೆ?

ಪಾಂ:—ಹಾಗಾದ್ರೆ ಏನು ಮಾಡೋದೋ ಈಗ? ಮೊದಮೊದಲು ಮುಂದಿಟ್ಟ ಕಾಲು ಹಿಂದಿಡೋದೇನೋ? ಚೆನ್ನಾಗಿಲ್ಲವಲ್ಲೋ? ನಾರಾಯಣಾ!

ನಾ:—ಅಂಗಾರೆ ಈ ಸಕುನಕ್ಕೇನು ಮಾಡೋದು ಬುದ್ಧಿ?

ಪಾಂ:—ಅದನ್ನೇ ನಾನೂ ಯೋಚಿಸುತ್ತಾ ಇರೋದು.

ನಾ:—ಬುದ್ಧಿ! ಮನೆಬಿಟ್ಟು ಒರಡೋವಾಗ ಪಂಚಾಗ ನೋಡಿದ್ರಾ ಬುದ್ಧಿ?

ಪಾಂ:— ನೋಡ್ದಿಲ್ಲವೇನೋ ಮತ್ತೆ? ಹೊತ್ತು, ಘಳಿಗೆ, ಎಲ್ಲಾ ಕೂಡಿಬಂದಿತ್ತಲ್ಲೊ! ಎರಡು ರೂಪಾಯಿ ತಗೊಂಡು ಆ ಸುಬ್ಬಾಶಾಸ್ತ್ರಿಗಳು ಅಮೃತಯೋಗ ಚೆನ್ನಾಗಿ ಕೂಡಿದೇಂತಂದ್ರಲ್ಲೋ?

ನಾ:—ಅದೆಂತಾ ಮೃತಯೋಗಾನೋ! ನಡೇರಿ ಬುದ್ಧಿ! ಈ ಪಟ್ಟು.

ಪಾ:— ಅಯ್ಯೋ ಮುಂಡೇದೇ! ನಿನ್ನ ಬಾಯಲ್ಲೂ ಅಪಶಕುನ ಬರಬೇಕಾಗಿತ್ತೇನೋ?

ನಾ:—ಯಾಕಾ ಬುದ್ಧಿ! ಅಂಗಂದ್ರೇನ್ಬುದ್ಧಿ?

ಪಾಂ:—ಮೃತಯೋಗವಲ್ಲವೋ ಕರ್ಮಿಷ್ಠ ಮುಂಡೇದೇ! 'ಅಮೃತಯೋಗಾ'ನ್ನು.

ನಾ:-—ಏನು ಬುದ್ಧಿ! ಅಮರ್ತಯೋಗ ಅಲ್ಲವ್ರಾ? ಎಂತೇದೋ ಒಂದು ಯೋಗ. ಇರ್ಲಿ, ಈಗೇನುಮಾಡ್ತೀರಿ ಬುದ್ಧಿ?

ಪಾಂ:—ಅದೇನು ಮಾಡೋದೋ? ಏನು ಬಿಡೋದೋ? ಹಾಂ! ಯಾಕೆ ಹೀಗೆ ಅಪಶಕುನಗಳಾದುವೂಂತ?

ನಾ:—ಬುದ್ಧಿ! ತಾವು ಅಳೇಕಾಲ್ದೋರು! ಇನ್ನೆಲ್ಲಾ ನೋಡ್ತಿದ್ದೀರಿ. ಈಗಿನ ಕಾಲ್ದೋರು ಇದ್ನೆಲ್ಲಾ ಲಕ್ಸದಾಗೇ ಮಡಗಾಕಿಲ್ಲ ಬುಡಿ ಬುದ್ಧಿ! ಓದರೋಯ್ತುದೆ ಆ ಚಿಂತೆ ಬುಟ್ಬುಡಿ.

ಪಾಂ:—ಏನ್ಸೋ ? ಅವರ ಹಾಗೆ ನೀನೂ ಆರಂಭಿಸಿದೆಯಲ್ಲಾ—ಹಾಗಾದ್ರೆ ಮದುವೆ ಬೇಡಾಂತ್ಲೇನೋ ನೀನು ಹೇಳ್ತಾ ಇರೋದು ?

ನಾ:—ಛೇ, ಛೇ ! ಅಂಗಲ್ಲಾ ಬುದ್ಧಿ ! ಮುಕುಂದಪ್ಪಾವ್ರ ಮನೆಗೆ ಈಗೋ ಗೋದು ಬೇಡಾಂತಂದೆ. ಸಕುನ ಸಂದಾಗಿಲ್ಲಾಂತ ತಾವೇ ಅಪ್ಪಣೆ ಕೊಡ್ಸಿದ್ರಲ್ಲಾ.

ಪಾಂ:—ಹಾಗಾದ್ರೆ ? ಈಗೇನು ಮಾಡೋದೂಂತ ?

ನಾ:—ಎಂಗೂ ಆ ಆರುವಯ್ಯನ ತಾವಾ ದೇವಸ್ತಾನಕ್ಕೋಯ್ತೀನೀಂತ ಏಳ್ಬುಟ್ರಿ. ದೇವರೇ ಆಡಿಸ್ಬುಟ್ಟ ತಮ್ ಬಾಯಾಗ್ಳಿಂದ ಆ ಮಾತ್ನ. ನಡೇರಿ ಬುದ್ಧಿ ! ದೇವಸ್ತಾನಕ್ಕೇ ಓಗೋವ. ಅಂಗೆ ಈ ಸೀರೆ ಕುಪ್ಪಾಸ್ನೂ ಆಮ್ಮನೋರಿಗೇ ಒಪ್ಪಿಸುಬುಡೀ ಬುದ್ಧಿ. ಮುಂದ್ಕಾದ್ರೂ ಒಳ್ಳೇದಾಯ್ತದೆ.

ಪಾಂ:—ಭೇಷ್ ! ನಾರಾಯಣ ! ನನ್ನ ಮನಸ್ಸಿನಲ್ಲಿದ್ದದ್ದೂ ಅದೇ. ನಡಿ ಹೋಗೋಣ. (ಹೊರಡುವನು).



ದೃಶ್ಯ ೯]　　　　[ಸ್ಥಾನ : ಒಂದು ನಿರ್ಜನ ಪ್ರದೇಶ

[ಪಾತ್ರಗಳು: ಸಾಧು ಮತ್ತು ಮುಕುಂದ್]

ಮು:—(ಸ್ವಗತ) ಪ್ರಭಾಕರನು ಇಲ್ಲಿಗೆ ಬರುವೆನೆಂದು ಹೇಳಿದನಲ್ಲಾ. ನನ್ನ ವ್ಯವಹಾರಗಳನ್ನು ಕುರಿತು ಆಲೋಚಿಸೋಣವೆಂದು ಹೇಳಿದನಲ್ಲಾ? ಇನ್ನೂ ಬರದಿರಲು ಕಾರಣ? ಹೂಂ! ಅವನ ಕಷ್ಟಗಳೆಂತಿರಬಹುದೋ? ಅಂತೂ ನನಗೆ ಸಹಾಯಮಾಡಲು ಸಂಪೂರ್ಣವಾಗಿ ಇಷ್ಟವುಳ್ಳವನೆಂದರೆ ಅವನೊಬ್ಬ. ಆದರೇನು? ಅವನಲ್ಲಿ ಹಣವಿಲ್ಲ. ಅವನೇನನ್ನು ತಾನೇ ಮಾಡಬಲ್ಲ?

ಹೂಂ! ಮುಕುಂದ! ಉದ್ಯೋಗವಳಿದು, ಸ್ಥಾನಮಾನಗಳು ಹಾಳಾಗಿ, ವರಮಾನವು ಕ್ಷಯಿಸಿ, ಆಶೆಗಳೆಲ್ಲವೂ ಭಸ್ಮವಾಗಿ, ಸಾಲಗಾರನ ಮಗನಾಗಿ, ನೀನು ಅಳಲಿ, ತೊಳಲಿ, ಬಳಲಿ ಬೆಂಡಾಗಿಹೋದೆ.

ಆಹಾ! ಘೋರಕರ್ಮದ ದುರ್ಘಟನೆಗಳೇ! ಅನುಲ್ಲಂಘನೀಯ ವಿಧಿಶಾಸನವೇ! ಮುಕುಂದ! ನಿನ್ನನ್ನು ಸುತ್ತುವರಿದಿದ್ದ ಸ್ತೋತ್ರಕಾರ ಸ್ನೇಹಿತರೆಲ್ಲಿ? ಬಹುಳವಾದ ಬಂಧುಬಳಗವೆಲ್ಲಿ? ಸತಿಸುತಸುತೆಯರೇಕೆ ನಿನ್ನಲ್ಲಿ ವಿರಸಗೊಂಡರು? ನಿನ್ನ ಜೀವನದಲ್ಲಿ ನಲಿದಾಡುತ್ತಿದ್ದ ಸುಖಶಾಂತಿಗಳು ಈಗೆಲ್ಲಿಗೆ ಮಾಯವಾದುವು?

ಇರಲಿ. ಇವೆಲ್ಲ ಕಷ್ಟಗಳೂ ಒಂದೆಡೆಯಿರಲಿ. ಪಾಂಡುರಂಗನ ಸಾಲ! ಲಲಿತೆಯಮೇಲೆ ಅವನಿಗಿರುವ ಮೋಹ! ನನ್ನ ಪ್ರಮಾಣ! ವೃದ್ಧನೊಡನೆ ವಿವಾಹದ ಪ್ರಸಕ್ತಿಯನ್ನು ಕೇಳಿದೊಡನೆಯೇ ಪಾಷಾಣಕಲುಷಿತ ಪ್ರಣಯಕ್ಕೆ ಅನುಮತಿಸಲಾರದೆ—ಪ್ರಚಂಡ ಕೆಂಡಗಳಂತೆ ಹೃದಯವನ್ನು ದಹಿಸುವ ದುರ್ಭರ ಶೋಕದ ಪರಿಣಾಮವಾಗಿ—ಪ್ರತಿಕ್ಷಣದಲ್ಲಿಯೂ ಆತ್ಮಹತ್ಯೆಗೆ ಸಿದ್ಧಳಾಗಿರುವ ನನ್ನ ಮುದ್ದು ಬಾಲಿಕೆ ಲಲಿತ! ಇವಳ ಹೃದಯತಾಪವನ್ನಾರಿಸಲು ಶಕ್ತಿಯಿಲ್ಲದ—ಅಖಂಡ ದಾರಿದ್ರ್ಯದಲ್ಲಿ ಸಿಲುಕಿಬಿದ್ದ—ನಾನು—ಮತಿಗೇಡಿ—ಹೇಡಿ—ಮುಕುಂದ! ಹೂಂ! ನಿನ್ನ ಬುದ್ಧಿ! ಸಾಹಸ! ಶಕ್ತಿ! ಚಾತುರ್ಯ! ಇವೆಲ್ಲವೂ ನೆಲಕ್ಕುರುಳಿ ಮಣ್ಣಿನಲ್ಲಿ

ಕಲೆತುಹೋದುವು. ಸತ್ವಹೀನನಾದ ನೀನು ಲಲಿತೆಯನ್ನು ಈ ಬಲವಂತ ವಿವಾಹದಿಂದ ರಕ್ಷಿಸಬಲ್ಲೆಯಾ ?

ಹೂಂ! ಮುಕುಂದ! ನಿನ್ನನ್ನು ಪ್ರೀತಿಸಿ ಗೌರವಿಸುವರಾರು ? ಅವರೆಲ್ಲರೂ ನಿನ್ನಮೇಲೆ ಒಳಸಂಚು ನಡೆಯಿಸಿ ಅಸಹಕಾರಮಾಡಿ ದೂರ ನಡೆದರು! ನೀನೋರ್ವ ಸಾಂಕ್ರಾಮಿಕಜಾಡ್ಯ ಪೀಡಿತನೆಂದವರ ಅಭಿಪ್ರಾಯ! ಕಾರಣ? ನಿನ್ನ ಬಡತನ! ಇದೀಗ ನೀವರಿಗೆ ಮಾಡಿದ ಉಪಕಾರಕ್ಕೆ ಪ್ರತೀಕಾರ! ಹಾಯ್! ಕೃತಘ್ನಪ್ರಪಂಚ! ವೇಷಧಾರೀ ಸಮಾಜ! ಹೂಂ! ಹಣ! ಹಣ! ಹಣ! ಇಂದು ಹಣದಮೇಲೆ! ಹಣದ ಒಳಗೆ! ಹೊರಗೆ! ಹಣದ ಸುತ್ತಲೂ! ಆದ್ಯಂತ ಹಣದ ಆಧಾರದಮೇಲೆ ಜಗತ್ತು ಚಲಿಸುತ್ತಲಿದೆ. ಹಣವೆಂದರೆ ಹಾಲು ಕುಡಿಯುವ ಶಿಶುವೂ ಸಹ ಹಾಂ! ಎಂದು ಕೈಯೊಡ್ಡುವ ವಿಚಿತ್ರಕಾಲವಿದು! ಆ ಹಣಕ್ಕೆ ಅಭಾವವು ಹುಟ್ಟಿತೆಂದರೆ, ಎಲ್ಲ ತೆರನಾದ ಅಪ್ರೀತಿ! ಅಪಖ್ಯಾತಿ! ಅನಾದರ!

ಹೂಂ! ಮುಕುಂದ! ಕಷ್ಟ! ಕಷ್ಟ! ಒಂದು ಕಷ್ಟವಳಿಯಿತೆಂದರೆ ಮತ್ತೆ ಎರಡು ಸಿದ್ಧ! ಈ ಕಷ್ಟಗಳ ಪರಿಹಾರಕ್ಕೆ ಪ್ರಯೋಜನವಿಲ್ಲದ ಪ್ರಚಂಡಪ್ರಯತ್ನ! ಮುಕುಂದ! ಸಾಕು! ಲಲಿತೆಯಮೇಲಣ ಆಶೆಯನ್ನು ತೊರೆ! ಇನ್ನುಳಿದವರನ್ನು ಮರೆ! ಬಯಲು ಭ್ರಾಂತಿಯನ್ನು ಬಿಡು! ಸಾಲಗಾರರ ಸಹವಾಸವು ಸಾಕು! ಈ ದುರ್ಭರ, ದೌರ್ಜನ್ಯ, ವ್ಯಸನ ಕಲುಷಿತ ಜೀವನವು ಸಾಕು! ಸಾರವಿಲ್ಲದ ಈ ಸಂಸಾರವು ಸಾಕು! ಸುಟ್ಟು ಭಸ್ಮವಾಗುತ್ತಲಿರುವ ಈ ಅನುಪಯೋಗ ಶರೀರದ ಪರಿಪೋಷಣೆಯು ಸಾಕು! ಇನ್ನೀ ಆತ್ಮನಾಶಕ—ಸಂಕಟಕಾರಕ—ಸಮೂಹದಲ್ಲಿ ನಿನಗಾವ ಹಿತವುಂಟೆಂದರಿತಿರುವೆ? ಮುಕುಂದ! ಭ್ರಮೆಯನ್ನು ತೊರೆ. ಕುಟುಂಬ ರಕ್ಷಣ ಭಾರವನ್ನು ಸೃಷ್ಟಿನಾಯಕನಮೇಲೆ ಹೊರಿಸು. ಒಡೆಯನನ್ನು ಸ್ಮರಿಸು. ತ್ಯಜಿಸು! ವ್ಯಕ್ತಿಮಾತ್ರವಾದ—ನಿಂದಿತ—ನಿನ್ನೀ ಅಪ್ರಯೋಜಕ ಶರೀರವನ್ನು—ಹೂಂ! ತ್ಯಜಿಸು! ನಿನ್ನ ಕಳೇಬರವನ್ನಾದರೂ ಹದ್ದು ಕಾಗೆಗಳು ಕಿತ್ತುಂಡು ಸಂತೋಷಪಡಲಿ. ಹೂಂ! ಪರಮಾತ್ಮ! ಮುಕುಂದನ ಸರ್ವಾಪರಾಧವನ್ನು ಇಷ್ಟವಿದ್ದಲ್ಲಿ ಕ್ಷಮಿಸು! ಅವನ ಪ್ರಾಣ

ವನ್ನು ಒಪ್ಪಿಸಿಕೋ ! (ಎಂದು ಕತ್ತಿಯಿಂದ ತಿವಿದುಕೊಳ್ಳುವುದಕ್ಕೆ ಹೋಗುವನು)

(ಅಷ್ಟರಲ್ಲಿ ಮರೆಯಲ್ಲಿ ಅಡಗಿದ್ದ ಒಬ್ಬ ಸಾಧುವು ಹೊರಬಿದ್ದು ಮುಕುಂದನ ಕೈಯನ್ನು ತಡೆದು)

ಸಾಧು:—ಸಾವಧಾನ ! ಆತ್ಮಹತ್ಯೆಯು ಆತ್ಮೀಕವಲ್ಲ.

ಮು:—(ಬೆಚ್ಚಿಬಿದ್ದು) ಯಾರದು ? ನನ್ನನ್ನು ತಡೆಯಲು ಕಾರಣ ?

ಸಾ:—ಕಾರಣಾಕಾರಣಗಳನ್ನು ಅನಂತರದಲ್ಲಿ ತರ್ಕಿಸಬಹುದು. ಆದರೂ ನಿಮಗೊಂದು ವಿಷಯವನ್ನು ಹೇಳಬೇಕೆಂದು ಬಂದೆ.

ಮು:—ನಾನಿಲ್ಲಿರುವುದನ್ನು ತಮಗೆ ಹೇಳಿದವರಾರು ?

ಸಾ:—ಆತ್ಮೀಕ ಸಂಬಂಧ !

ಮು:—ನನಗರುಹಬೇಕಾದ ವಿಷಯ ? ಅದು ಯಾವ ಸಂಬಂಧವಾಗಿ ?

ಸಾ:—ನಿಮ್ಮ ಸಂಬಂಧವಾಗಿಯೇ ! ನೀವು ಸ್ವತಂತ್ರಹೀನರು ! ನಿಮ್ಮನ್ನು ನಂಬಿದವರನೇಕರಿರುವರು.

ಮು:—ಸಾಧುಗಳೇ ! ನಾನದನ್ನೊಪ್ಪಲಾರೆ ! ನನ್ನನ್ನು ನಂಬಿ ಯಾರಿಗೇನು ಪ್ರಯೋಜನವುಂಟು ? ನಾನೂ ಯಾರನ್ನೂ ನಂಬುವಂತಿಲ್ಲ. ಎಲ್ಲರನ್ನೂ ನಂಬಿ ಕೆಟ್ಟವನು ನಾನು !

ಸಾ:—ಆದರೂ ಒಬ್ಬನನ್ನು ಮಟ್ಟಿಗೆ ಚೆನ್ನಾಗಿ ನಂಬಲು ಮರೆತುಹೋದಿರಿ.

ಮು:—ಯಾರನ್ನು ?

ಸಾ:—ಪರಮೇಶ್ವರನನ್ನು ! ಸೃಷ್ಟಿ, ಸ್ಥಿತಿ, ಲಯಾಧಿಕಾರಿಯನ್ನು !

ಮು:—ಅವನನ್ನೂ ನಂಬಿ ಕೆಟ್ಟೆ. ನನ್ನಲ್ಲಿ ಅವನಿಗೆ ಕನಿಕರವಿಲ್ಲ.

ಸಾ:—ಏನು ? ಏನಿದೀ ಅಜ್ಞಾನ ?

ಮು:—ಅಜ್ಞಾನವೇತಕ್ಕೆ ? ಜ್ಞಾನಾಭಿವೃದ್ಧಿಗೆ ಕಿಂಚಿತ್ತಾದರೂ ಅವಕಾಶವನ್ನೀಯದ, ಈ ಆತ್ಮನಾಶಕ, ಪಾಪಪೂರಿತ, ಘೋರಸಮೂಹದಿಂದ, ಎಡೆಬಿಡದೆ ಹಗಲಿರುಳೂ ಕಾಡುವ ಸಂಸಾರ ಬಂಧನದಿಂದ ವಿಮುಕ್ತ

ನಾಗಲು ಯತ್ನಿಸುವುದು ಅಜ್ಞಾನವೇ ? ಅಲ್ಲ, ಅಲ್ಲ, ಸಾಧುಗಳೇ ! ಇದೀಗ ಜ್ಞಾನಮಾರ್ಗದ ಸಮಾರಂಭ !

ಸಾ:—ಜ್ಞಾನಮಾರ್ಗದ ಸಮಾರಂಭಕ್ಕೆ ಆತ್ಮಹತ್ಯೆಯು ಉತ್ತೇಜಕರವೆಂದು ನಿಮಗೆ ಹೇಳಿದವರಾರು ? ಪವಿತ್ರತಮವಾದ ಜ್ಞಾನವನ್ನು ಸಾಧಿಸಿಕೊಳ್ಳಲೋಸುಗ ನಿರ್ಮಿತವಾದ ಸಾಧನಶರೀರವನ್ನು ನಾಶಪಡಿಸಿಕೊಳ್ಳುವುದು ಅಜ್ಞಾನವಲ್ಲದೆ ಮತ್ತೇನು ? ಕರ್ತವ್ಯಶೂನ್ಯರಾಗುವುದು ಮಾನವರಿಗೆ ಹಿತವಲ್ಲ.

ಮು:—ಇದನ್ನು ಹೇಗೆ ನಿರೂಪಿಸುವಿರಿ ?

ಸಾ:—ನೀವು ಕೈಹಿಡಿದ ಹೆಂಡತಿಯು ಜೀವಿಸಿರುವಳು !

ಮು:—ಅಹುದು.

ಸಾ:—ನಿಮಗೆ ಮೂವರು ಮಕ್ಕಳಿರುವರಲ್ಲವೆ ?

ಮು:—ಅದನ್ನೂ ಒಪ್ಪಿಕೊಳುತ್ತೇನೆ.

ಸಾ:—ಒಬ್ಬಿಬ್ಬರು ಹಿತೈಷಿಗಳೂ ಇನ್ನೂ ಉಳಿದಿರುವರಲ್ಲವೆ ?

ಮು:—ಆಗಲಿ. ಅದನ್ನೂ ಅಂಗೀಕರಿಸುತ್ತೇನೆ. ಆದರೆ ಸಹಾಯಮಾಡಲು ಅವರಿಗೆ ಶಕ್ತಿಯಿಲ್ಲ.

ಸಾ:—ಇರಲಿ. ಆತ್ಮಹತ್ಯೆಯನ್ನು ಮಾಡಿಕೊಂಡು - ಪತ್ನಿಯ ಮಂಗಳಸೂತ್ರವನ್ನು ಹರಿದು ಚೆಲ್ಲಿ – ಆಕೆಯನ್ನು ನಿರಂತರ ಶೋಕಕ್ಕೆ ಒಳಪಡಿಸುವುದು – ನಿಮ್ಮೀ ನೂತನ ಜ್ಞಾನ ಸಮಾರಂಭದ ಪ್ರಥಮ ಪ್ರತಿಫಲವಲ್ಲವೆ ?

ಮು:—ಆದರೆ, ನನ್ನನ್ನು ಕಾಡುತ್ತಿರುವ ಘೋರ ದಾರಿದ್ರ್ಯ ! ಅದನ್ನು ಪರಿಹರಿಸುವವರು ?

ಸಾ:—ನಿಮ್ಮ ಕ್ಷೇಮವು ಪರಮಾತ್ಮನನ್ನೇ ಸೇರಿದುದು-ಯೋಚಿಸಿ. ಆತನನ್ನು ನಂಬಿ.

ಅನನ್ಯಾಶ್ಚಿಂತಯಂತೋಮಾಂ ಯೇಜನಾಃ ಪರ್ಯುಪಾಸತೇ ।
ತೇಷಾಂ, ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥

ಇದರ ತತ್ವಾರ್ಥವನ್ನು ಅರಿಯದೆ ಹೋದಿರಿ. ಪರಮಾತ್ಮನಲ್ಲಿ ನಿಮಗೆ ನಂಬಿಕೆಯು ಕುಂದಿತು. ದುರ್ದೆಶೆಯೆಂಬ ನೆವದಿಂದ, ಪ್ರೇಮದ ಮಕ್ಕಳನ್ನು ಸಾಕಲಾರಿರೆಂಬ ಶಂಕೆಯಿಂದ, ನೀಚವಾದ ಈ ಆತ್ಮಹತ್ಯೆಯ ಪ್ರಯತ್ನವನ್ನು ತೀವ್ರಾಭಿಲಾಷೆಯಿಂದ ಕೈಕೊಂಡು, ಅದರ ಪರಿಣಾಮವಾಗಿ ಅವರನ್ನು ತಿರುಕರಂತೆ ಬೀದಿಬೀದಿಯಲ್ಲಿ ಅಲೆಯಿಸಿ, ಅವರ ಭವಿಷ್ಯತ್ತನ್ನು ವಿಷಮಯ ಮತ್ತು ಅಮಂಗಳಕಾರಕ ದುರ್ಭರ ಸನ್ನಿವೇಶಗಳಿಗೊಳಪಡಿಸುವುದು ಎರಡನೆಯ ಪ್ರತಿಫಲ. ಈ ಸ್ಥಿತಿಯಲ್ಲಿ ಆತ್ಮಹತ್ಯೆಯನ್ನು ಮಾಡಿಕೊಂಡರೆ ಬಂದ ಭಾಗ್ಯವೇನು ? ಕರ್ತವ್ಯಶೂನ್ಯತೆಯಿಂದ ಕಲುಷಿತವಾದ ಈ ಆತ್ಮಕ್ಕೆ ಪರಲೋಕದಲ್ಲಿ ಸುಸ್ವಾಗತವಿಲ್ಲ. ಇಹಲೋಕದಲ್ಲಿ ನಿಂದೆಯು ತಪ್ಪದು. ಸಮಾಜ ಶೋಕದಿಂದ – ಸಂಸಾರಬಂಧನದಿಂದ ಬಿಡುಗಡೆ ಹೊಂದುವ ನೆವದಲ್ಲಿ – ಸಮೂಹ ಕ್ಷೇಮಕ್ಕೆ ಅತ್ಯಂತ ಹಾನಿಕರವಾದ ಇಂತಹ (ಆತ್ಮಹತ್ಯೆಯ) ಉದಾಹರಣೆಯನ್ನು ತೋರಿಕೊಡುವುದು - ಮಾನವನಿಗೆ ಶ್ರೇಯಸ್ಕರವೆನಿಸದು; ಜನತೆಯು ಒಪ್ಪಲಾರದು. ಇದರಿಂದ ಜೀವಿತದ ಪರಾಕಾಷ್ಠತೆಯನ್ನು ಮುಟ್ಟಿದಂತಾಗುವುದಿಲ್ಲ. ಆತ್ಮಹತ್ಯೆಯು ದೈವಶಾಸನಕ್ಕೂ ವಿರೋಧವೆನಿಸುವುದು.

"ಜೀವನ್ ಭದ್ರಾಣಿ ಪಶ್ಯತಿ"

ಆಲೋಚಿಸಿ; ಪ್ರಾಣವೊಂದುಳಿದಿದ್ದರೆ ಸತಿಸುತರ ಕ್ಷೇಮವನ್ನು ಎಂದಾದರೊಂದು ದಿನ ನೀವು ನೋಡಲಾದೀತು.

"ರಜನೀಕೇ ಪೀಛೇ ರಜನೀ ನೈ ಆಯೇಗಾ"

ಕಾಳರಾತ್ರಿಯು ತೊಲಗಿದರೆ ಪ್ರಜ್ವಲಿತ ಪ್ರಭಾತವಾಗದೆ ಇರದು. ಜೀವನ ತತ್ವಾರ್ಥಗಳ ನೈಜಿಕ ನೆಲೆಯನ್ನು ತೋರಿಕೊಡುವುದಕ್ಕಾಗಿ ಇಂತಹ ಕಠಿಣ ಸನ್ನಿವೇಶಗಳೂ – ಅಸಹನೀಯ ಯಾತನೆಗಳೂ—ಮಾನವನ ಜೀವನದಲ್ಲಿ ಪ್ರಾಪ್ತವಾಗುವುವು. ಇದು ಪರಮಾತ್ಮನ ವಿಚಿತ್ರಲೀಲೆ. ಕೇಳಿ. ವಿಪತ್ತು ವಿರಕ್ತಿಗೆ ಕಾರಣ. ವಿರಕ್ತಿಯಿಂದ ಆತ್ಮಶುದ್ಧತೆಯುಂಟಾಗುವುದು. ಆತ್ಮಶುದ್ಧತೆಯಿಂದ, ಜ್ಞಾನೋದಯವಾಗಿ—ನಿರ್ಮಲಜ್ಞಾನದಿಂದ—ಸಂಸಾರ ಬಂಧನಗಳು ಅಳಿದು—ಮೋಕ್ಷಸಾಧನಕ್ಕೆ ಅವಕಾಶವಾ

ಗುವುದು. ಆದುದರಿಂದ ಈ ಭ್ರಮೆಯನ್ನು ತೊರೆದು, ದೈವವನ್ನು ನಂಬಿ, ಕರ್ತವ್ಯವನ್ನು ಪರಿಪಾಲಿಸಿ.

ಮು:—ಸಾಧುವರ್ಯರೇ! ಒಪ್ಪಿದೆ! ನನ್ನ ಮನಸ್ಸಿಗೆ ಮುಸುಕಿದ ಮೋಡವು ತೊಲಗಿತು. ನವಜ್ಞಾನವು ಉದಯಿಸಿತು. ನನ್ನ ಅವಿವೇಕವನ್ನು ಕ್ಷಮಿಸಿ.

(ಎಂದು ಸಾಧುವಿಗೆ ನಮಸ್ಕರಿಸುತ್ತಿರುವಾಗ ಸಾಧುವು ಅದೃಶ್ಯನಾಗುವನು. ಮೇಲೆದ್ದು ಸಾಧುವನ್ನು ಕಾಣದೆ)

ಹಾಂ! ಇದೇನು ಕನಸೇ? ಎಲ್ಲಿ ಸಾಧುಗಳು? ಅವರೆಲ್ಲಿ ಹೋದರು?

(ಎಂದು ಹುಡುಕುತ್ತ ಹೋಗುವನು)



ದೃಶ್ಯ ೧೦]                                    [ಸ್ಥಾನ: ಮುಕುಂದನ ಮನೆ.

(ಸೀತೆಯು ಚಿಂತಾಸಕ್ತಳಾಗಿ ಕುಳಿತಿರುವಳು)

ಸೀ:—(ಸ್ವ) ಇಂದು ಅವರಿನ್ನೂ ಮನೆಗೆ ಬರಲಿಲ್ಲವೇಕೆ? ಇಷ್ಟು ತಡವಾದುದಕ್ಕೆ ಕಾರಣ? ಹೂಂ! ಅವರಿಗೂ ಚಿಂತೆಯು ಹೆಚ್ಚಿಹೋಯಿತು. ಅವರೇನನ್ನು ತಾನೇ ಮಾಡಬಲ್ಲರು? ಮನೆಯ ಕಷ್ಟಗಳನ್ನಂತೂ ಅವರಲ್ಲಿ ಹೇಳುವ ಹಾಗೆಯೇ ಇಲ್ಲ.

[ಪ್ರವೇಶ: ಶ್ಯಾಮಲಾ]

ಶ್ಯಾ:—ಅಮ್ಮಾ! ಅಮ್ಮಾ! ಮನೇವ್ರು ಬಂದಿದ್ದಾರೆ. ಬಾಡಿಗೆ ಬೇಕಂತೆ. ಅಪ್ಪಾವ್ರು ಎಲ್ಲಿದ್ದಾರೇಂತ ಕೇಳಿದ್ರು. ಅವರು ಮನೇಲಿಲ್ಲ ಹೊರಗೆ ಹೋಗಿದ್ದಾರೇಂದೆ. ಅವರು ಬರಲೀಂತ ಬಾಗಿಲಲ್ಲೇ ಕಾಯ್ಕೊಂಡು ಕೂತಿದ್ದಾರಮ್ಮಾ.

ಸೀ:—ಅವರು ಬಂದರೆ ಹೇಳ್ತೀನೀಂತ ಹೋಗಿ ಹೇಳಮ್ಮಾ.

ಶ್ಯಾ:—ಮನೇವರಿಗೇನಮ್ಮಾ?

ಸೀ:—ಹೌದು.

ಶ್ಯಾ:—ನಾನು ಹೇಳಿದೇಮ್ಮಾ ಆಗಲೇ. "ಅವರೇ ಬರಲಿ. ಎಷ್ಟು ಸಲ ಬಾಡಿಗೇಗೆ ಬರೋದೂಂ"ತ ಹಠಹಿಡಿದು ಕೂತಿದ್ದಾರಮ್ಮಾ.

ಸೀ:—ಇನ್ನೊಂದು ಸಲ ಹೋಗಿ ಹೇಳಮ್ಮಾ. ಸುಮ್ಮನೆ ಯಾಕೆ ಕಾಯೋದು? ಅವರು ಯಾವಾಗ ಬರ್ತಾರೋ ಏನೋ? ಬಂದ ಮೇಲೆ ಹೇಳ್ತೀವೀಂತ ಹೇಳಮ್ಮಾ.

ಶ್ಯಾ:—ಆಗಲೀಮ್ಮಾ (ಎಂದುಕೊಂಡು ಶ್ಯಾಮಲೆಯು ಹೋಗುವಳು)

ಸೀ:—(ಸ್ವಗತ) ಈ ಸಂಕಟಕ್ಕೆ ಏನುಮಾಡೋದು? ಇವರಿಗಂತೂ ಮನಸ್ಸೇ ಕೆಟ್ಟು ಹೋಯಿತು. ಹೊರಗೆ ಹೋದರೆ ಕಷ್ಟ. ಒಳಗೆ ಬಂದರೆ ಕಷ್ಟ. ನಿಂತ ಸ್ಥಳದಲ್ಲಿ ಯಾರಾದ್ರೂ ಸಾಲಗಾರರು ಸಿದ್ಧ. ಈಗ ಹಣವಿಲ್ಲ ಎಂದರೆ ಸ್ವಲ್ಪಕ್ಕೆ ಕೇಳೋದಿಲ್ಲ. ಯಾವುದಾದ್ರೂ ದುಡ್ಡು ಒದಗಿದರೆ ಅಲ್ಲವೇ ಈ ಕಷ್ಟಗಳು ಎಳ್ಳಷ್ಟಾದ್ರೂ ಹರಿಯೋದಕ್ಕೆ? ಅಂತೂ ಈ ಅನಿವಾರ್ಯಗಳಿಗೆ ನಿವಾರಣೆಯಿಲ್ಲ.

ಈಚೆಗೆ ಅವರು ನೆಟ್ಟಗೆ ಊಟ ಸಹಾ ಮಾಡೋದಿಲ್ಲ. ನಿದ್ರೆ ಅನ್ನೋದು ಮೊದಲೇ ಇಲ್ಲ. ಅಂತೂ ಬರಬರತಾ ಬಹು ಕ್ರೂರವಾಗತಾ ಇದೇ ಗ್ರಹಚಾರ! ಮನೇಲಿ ಏನೂ ಇಲ್ಲ ಅಂತ ಅವರ ಹತ್ತರ ಹೇಳೋದೂ ಭಯವಾಗಿದೆ. ಹಾಗೂ ನಿರ್ವಾಹವಿಲ್ಲದೆ ಏನನ್ನಾದ್ರೂ ಹೇಳಿದ್ರೆ "ಈ ಹಾಳು ಪ್ರಾಣ ಕಳಕೊಂಡುಬಿಡ್ತೀನೀ" ಅಂತಾರೆ. "ನನ್ನನ್ಯಾಕೆ ಹೀಗೆ ಪರೀಕ್ಷೆಮಾಡ್ತಾ ಇದ್ದಾನೆ ದೇವ್ರು?" ಅಂತ ವ್ಯಥೆಪಡ್ತಾರೆ. ಹೂಂ! ಈ ಸಂಕಟ ಹೇಗೆ ತಡೀಲಿ?

(ಪ್ರವೇಶ: ಮುಕುಂದ: ಆಯಾಸಪೀಡಿತನಾಗಿ)

ಶ್ಯಾ:—ಅಪ್ಪಾ! ಅಪ್ಪಾ! ಮನೇವ್ರು ಬಂದಿದ್ರಪ್ಪಾ ಬಾಡಿಗೇಗೆ. ಬಹಳ ಹೊತ್ತು ಕಾದಿದ್ರು.

ಸೀ:—ಲೇ ಶ್ಯಾಮುಲಾ! ಇರಲಿ ಹೋಗೆ! ಸಮಯ ಇಲ್ಲ, ಸಂದರ್ಭ ಇಲ್ಲ. ನೆಟ್ಟಗೆ ಮನೇಗೆ ಬರೋದಕ್ಕೆ ಮುಂಚೆ ದೊಡ್ಡ ಸಮಾಚಾರ!

ಶ್ಯಾ:—ಅಲ್ಲಾಮ್ಮಾ! ಮನೇವ್ರು ಹೇಳಿದ್ರು "ಅಪ್ಪಾವರು ಬಂದ ತಕ್ಷಣ ನಾ ಬಂದಿದ್ದೇಂತ ಹೇಳಮ್ಮಾ"ಂತ. ಅದಕ್ಕೇ ಹೇಳಿದೆ. ಇದರಲ್ಲೇ ನಮ್ಮಾ ತಪ್ಪು?

ಸೀ:—ಅವರು ದಣಿದು ಬಂದಿದ್ದಾರೆ. ಈಗೇನಮ್ಮಾ ಅವಸರ ಹೇಳೋದಕ್ಕೆ?

ಆ:—ಅಪ್ಪಾ! ನನ್ನ ಬಟ್ಟೇಲ್ಲಾ ಹರಿದುಹೋಯಿತಪ್ಪಾ! ಬೇರೆ ಹೊಲಿಸಿ ಕೊಡಪ್ಪಾ! ಅಮ್ಮನ್ನ ಕೇಳಿದ್ರೆ ಅಪ್ಪಾವ್ರು ಬರ್ಲೀಂತಂದ್ಲು. ಸ್ಕೂಲು ಹುಡುಗರೆಲ್ಲಾ ನಗ್ತಾರಪ್ಪಾ ನನ್ನ ಬಟ್ಟೇನ್ನ ನೋಡಿ. ಇದ್ಯಾಕೆ ಹೀಗಿದ್ದೀಯಾ? ನಿಮ್ಮಪ್ಪಾವರಿಗೆ ಅಷ್ಟು ಸಂಬಳಾ ಬರತ್ತಲ್ಲಾಂತ? ಮೊನ್ನೆ ಮೇಷ್ಟ್ರು ಕೂಡ ಹೇಳಿದ್ರು. "ಬೇರೆ ಬಟ್ಟೆ ಹೊಲಿಸ್ಕೋ. ಇನ್ಸ್ಪೆಕ್ಟರು ಬರ್ತಾರೇ"ಂತ.

ಸೀ:—ನಿನಗೂ ಈಗಲೇ ಅವಸರವಾಗಿತ್ತೇನಪ್ಪಾ? ದುಃಖ ಹೇಳಿಕೊಳ್ಳೋದಕ್ಕೆ?

ಆ:—ಹೋಗಮ್ಮ! ಯಾವಾಗ ಕೇಳ್ಲಿ ಬಯ್ಯೋದು. ಇನ್ಯಾರನ್ನು ಕೇಳಬೇಕೋ ನಾನು?

ಸೀ: —ಆಗಲಿ, ಇನ್ನೆರಡು ದಿವಸ ತಡಿಯೋ ಅಪ್ಪ !

ಆ:—ಹೂಂ ! ಅವತ್ತು ಕೇಳಿದಾಗ್ಲೂ ಹಾಗೇ ಅಂದೆ. ಅವತ್ತಿನಿಂದ ಇವತ್ತಿಗೆ ಎರಡೇ ದಿವಸವೇನೋ ಪಾಪ ?

ಮು:—ಲೋ ಆನಂದು ! ಇನ್ನು ನನ್ನಿಂದ ಸಾಧ್ಯವಿಲ್ಲ. ನಾಳೇಯಿಂದ ನೀನು ಸ್ಕೂಲಿಗೆ ಹೋಗೋದು ನಿಲ್ಲಿಸಿಬಿಡೋ. ಈ ಸಂಸಾರವನ್ನು ಇನ್ನು ಸುಧಾರಿಸೋದಕ್ಕಾಗೋದಿಲ್ಲ. ಹಾಗೂ ಸ್ಕೂಲು ತಪ್ಪಿದ್ರೆ ತಪ್ಪಲಿ. ಮುಂದೆ ನೋಡಿಕೊಳ್ಳೋಣ. ಲೇ ಶ್ಯಾಮಲಾ ! ಹೋಗಮ್ಮಾ! ಸ್ವಲ್ಪ ನೀರು ತಕ್ಕೊಂಡುಬಾಮ್ಮ ಕುಡಿಯೋದಕ್ಕೆ.

(ಶ್ಯಾಮಲೆಯು ಹೋಗುವಳು)

(ಸ್ವಗತ) ಹೂಂ! ಬೆಂಡಾಗಿಹೋಯಿತು ಶರೀರವೆಲ್ಲಾ. ನೀನೇ ಸಲಹಪ್ಪಾ ದೇವ್ರೇ! ನನ್ನ ಹೀಗೆ ಸಾಲಗಾರನ್ನ ಮಗನಾಗಿ ಮಾಡಿದೆಯಲ್ಲೋಪ್ಪಾ! ಬೆಳಗಿನಿಂದ ಸಂಜೇವರೆಗೂ ಹೀಗೆ ಸಾಲಗಾರರ ಮನೇಗೆ ಸುತ್ತೀ ಸುತ್ತೀ ಸಾಯೋದು ಇದೆಂಥಾ ಕೆಟ್ಟಕರ್ಮವಪ್ಪಾ ನಂದೂ ? ಯಾವ ದೇವರಲ್ಲಿ ಹರಕೆ ಹೊತ್ತು ನನ್ನ ಹೆತ್ತಳೋ ನನ್ನ ತಾಯಿ ! ಈ ವಿಚಿತ್ರ ಪ್ರಪಂಚದಲ್ಲಿ ತಲೆಯೆತ್ತಿ ತಿರುಗೋದು ಹೇಗೆ ? ಕೊಟ್ಟವರ ಸಾಲವನ್ನು ಹೇಗೆ ತಾನೇ ತೀರಿಸಲಿ ? ಕೆಲಸ ! ಕೆಲಸ ! ಕೆಲಸ ! ಕೆಲಸ ಸಿಕ್ಕಲಿಲ್ಲ. ಕಾಸು ಕೈಲಾಸವಾಯಿತು. ಅನ್ನ ವಿಷವಾಯಿತು. ನಿದ್ರೆ ಸ್ವಪ್ನವಾಗಿ ಹೋಯಿತು. ಮೈಬೇರೆ ಅಸ್ವಸ್ಥ ! ಬುದ್ಧಿ ಬೇರೆ ಭ್ರಮಿಸಿಹೋಯಿತು. ಸಾಹಸ, ಚಾತುರ್ಯ ಎಲ್ಲಾ ಗಾಳೀಲ್ಲಿ ಹಾರಿಹೋಯಿತು. ಮಾನ ಮೊದಲೇ ಹೋಯಿತು. ಹೂಂ! ಎಲ್ಲಾ ಶೂನ್ಯ ! ಹೊರಗೆ ಹೋದ್ರೆ ತಗಾದೆ ! ಒಳಗೆ ಬಂದ್ರೆ ತಗಾದೆ ! ಇವರಲ್ಲಿ ನಗೋನ್ರು ಮುಂದೆ ಎಡವಿ ಬೀಳೋದು. ಈ ಬಾಳೋ! ಈ ಗೋಳೋ!

(ಶ್ಯಾಮಲೆಯು ಕುಡಿಯುವುದಕ್ಕೆ ನೀರನ್ನು ತರುವಳು)

ಸೀ:—ಏಳೀಂದ್ರೆ ಊಟಕ್ಕೆ.

ಮು:—ಸೀತಾ ! ಯಾವ ಕೋಲಾಹಲಕ್ಕೆ ?

(ಆನಂದನು ಒಂದು ಕಾಗದವನ್ನು ಕೈಯಲ್ಲಿ ಹಿಡಿದು)

ಆ:—ಅಪ್ಪಾ ! ಕಾಗದ. (ಎಂದು ಕೊಡುವನು)

ಮು:—ಅದನ್ನು ತೆಗೆದುಕೊಂಡು ಓದಿ) ಸರಿ. (ಎಂದು ನಿಟ್ಟುಸಿರುಬಿಡು ವನು)

ಸೀ:—ಯಾರದು ಕಾಗದ ?

ಮು:—ದಿನಸಿ ಅಂಗಡಿ ಧರಣಯ್ಯನದು. ದಾವಾ ಮಾಡ್ತಾನಂತೆ.

ಸೀ:—ಮಾಡೋವ್ರೆಲ್ಲಾ ಮಾಡ್ಲಿ. ನಾವು ಹುಟ್ಟಿರೋದೇ ಕಷ್ಟಪಡೋದಕ್ಕೆ.

ಮು:—ಸೀತಾ ! ನಮ್ಮ ಜೀವಿತವು ಕಳೆಗುಂದಿತು. ನಮ್ಮನ್ನು ಎಡೆಬಿಡದೆ ಆವರಿಸಿದ ಈ ಬಡತನ ! ಅದು ನಮ್ಮನ್ನು ಹರಿದು ನುಂಗುತ್ತಿದೆ. ಹಿಡಿದು ಹಂಗಿಸುತ್ತಿದೆ. ಇದರಲ್ಲಿ ಪರಿಹಾಸ್ಯಮಾಡುವ ಸಮೂಹ ! ಅದರ ಮುಂದೆ ನಾಚಿಕೆಯನ್ನುಳಿದು ನಾಟ್ಯವಾಡುವ ನಾವು ! ಕಷ್ಟ ನಷ್ಟನಿಷ್ಠೂರಗಳಿಗೊಳಗಾದ ಈ ಹಾಳಾದ ಬಾಳು. ಅಯ್ಯೋ ಸೀತಾ! ಯಾವುದಾದರೊಂದು ಪ್ರಳಯವು ಬಂದು, ನಮ್ಮೆಲ್ಲರನ್ನೂ ಒಮ್ಮಿಂ ದೊಮ್ಮೆಯೇ ಕೊಚ್ಚಿಕೊಂಡು ಹೋಗಲಾರದೇತಕ್ಕೆ ? ಆಗ ನಮ್ಮೀ ದುಸ್ಸಹ ಯಾತನೆಗಳು ಒಂದೇ ಸಲ ಅಳಿಯಬಹುದಲ್ಲವೆ ?

ಸೀ:—ನಿಜ. ಹಾಗಾಗುವುದು ದೈವಸಂಕಲ್ಪವಲ್ಲ. ಹಾಗಾದಲ್ಲಿ ಕಷ್ಟವು ಸುಖವಾಗಿ ಪರಿಣಮಿಸುವುದು. ಜೀವನದ ಸ್ವಾರಸ್ಯವು ಕೆಡುವುದು. ಪಾಪದಲ್ಲಿ ಭೀತಿಯು ತೊಲಗುವುದು. ಕಷ್ಟಗಳನ್ನು ಸಶೇಷವಾಗಿ ಅನುಭವಿಸಿದರೇನೇ, ಕರ್ಮವು ಅಳಿದು, ಜ್ಞಾನದ ಉದಯವಾಗಿ, ಜೀವನದ ನೈಜಿಕ ನೆಲೆಯು ಕಾಣಬೇಕಾದರೆ. ಹಾಗೂ ಎಲ್ಲ ಕಷ್ಟಗ ಳನ್ನೂ ಒಂದೇ ಸಲ ಅನುಭವಿಸುವುದು ಅಸಾಧ್ಯ. ಆದ್ದರಿಂದಲೇ ಬಿಡಿಬಿಡಿಯಾಗಿ ಅನುಭವಿಸುತ್ತಾ ಬರಬೇಕು. ಇದೇ ಜೀವನದ ರಹಸ್ಯ ! ಆತ್ಮೀಕ ಪರಿವರ್ತನೆಯ ಸಮಾರಂಭ !

ಮು:—ಈ ರಹಸ್ಯವನ್ನು ನಿನಗಾರು ಬೋಧಿಸಿದರು ?

ಸೀ:—ನಾನು ಓದಿದ 'ಆತ್ಮೀಕ ಸಂಸ್ಕಾರ' ಪತ್ರಿಕೆ.

**(ಪ್ರವೇಶ: ನಾರಾಯಣ)**

**ಮು:—ಯಾರದು ?**

**ನಾ:—ನಾನು ಬುದ್ಧಿ ! ಪಾಂಡುರಂಗಪ್ನೋರ ಜವಾನ.**

ಸೀ:—(ಸ್ವಗತ) ಮತ್ತೊಂದು ಕಾಟ! ಅಂತೂ ಈ ಸಾಲಗಾರರ ಹಾವಳಿ ನಮ್ಮನ್ನು ಬಿಟ್ಟದ್ದಲ್ಲ.

ನಾ:—ಬುದ್ಧಿ! ನೆಗ್ನ ನಿಕ್ಸಯಾ ಮಾಡೋಕೆ ಯಾವಾಗ ಬರಾನಾಂತ ಕೇಳ್ಕೊಂಡು ಬರೇಳಿದ್ರು ಎಜಮಾನ್ರು.

ಮು:—ನಾನೇ ಬರ್ತೀನೀಂತ ಹೇಳಪ್ಪ.

ನಾ:—ಅಪ್ಪಣೇ ಬುದ್ಧಿ! (ಎಂದುಕೊಂಡು ಹೋಗುವನು)

ಮು:—(ಸ್ವಗತ) ಎಲ್ಲಾ ಗ್ರಹಚಾರ!



ದೃಶ್ಯ ೧೧] [ಸ್ಥಾನ: ಬೀದಿ.

[ಪ್ರವೇಶ: ಲಲಿತ]

ಲಲಿತ:—(ಸ್ವಗತ) ಲಲಿತ! ನಿರ್ಭಾಗ್ಯೆ! ನಿನ್ನ ಬಾಳಿಗೆ ನೆಲೆಯಿಲ್ಲದಂತಾಯಿತು. ಯೌವನವು ಪ್ರಸನ್ನಕಲುಷಿತವಾಯಿತು. ತಂದೆಯ ಸಾಲ! ಅದರ ಸಲುವಾಗಿ ಮುದುಕ ಪಾಂಡುರಂಗರಾಯರ ವ್ಯಾಮೋಹದ ವೃದ್ಧಿ! ಅಹುದು ಲಲಿತ! ನಿನ್ನ ರೂಪು ನಿನ್ನ ತಂದೆಗೆ ಶತ್ರುವಾಯಿತು. ಆತನ ಎಲ್ಲೆಯಿಲ್ಲದ ಮಾನಸಿಕ ಶೋಕಕ್ಕೆ ಕಾರಣವಾಯಿತು. ನನ್ನನ್ನೇ ಮದುವೆಮಾಡಿಕೊಳ್ಳಬೇಕೆಂಬುದು ಆ ವಯೋವೃದ್ಧರ ದೃಢಸಂಕಲ್ಪ. ಇದಕ್ಕೆ ಕಾರಣ? ನನ್ನನ್ನು ಧಾರೆಯೆರೆದು ಕೊಡುವೆನೆಂದು ಪಾಂಡುರಂಗರಾಯರಿಗೆ ಆಸತ್ಕಾಲದಲ್ಲಿ ಪ್ರಮಾಣ ಮಾಡಿ ನನ್ನ ತಂದೆಯು ತಂದ ಸಾಲ. ನನ್ನ ತಂದೆ ನಿರಪರಾಧಿ. ಈಗೇನು ಮಾಡುವುದು? ಅವರು ತಮ್ಮ ಪ್ರಮಾಣವನ್ನು ನೆರವೇರಿಸದಿದ್ದರೆ ಅವರ ಕಷ್ಟಗಳು ಒಂದಕ್ಕೆ ನೂರಾಗುವುವು. ಪ್ರಮಾಣವನ್ನು ನೆರವೇರಿಸಿದರೆ ನಾನು ಈ ಮುದುಕರನ್ನು ಮದುವೆಯಾಗಲೇಬೇಕು. ಆಗ ತಂದೆಯು ಸಾಲದಿಂದ ಬಿಡುಗಡೆ ಹೊಂದಬಹುದು. ಆದರೆ ನಾನು ಪ್ರಾಣತ್ಯಾಗಮಾಡಿಕೊಳ್ಳಬೇಕಾಗುವುದು. ಅದನ್ನು ನೋಡಿ ನನ್ನ ತಾಯ್ತಂದೆಯರೂ ಅಳಿಯುವರು. ಅನಂತರ ಉಳಿಯುವವರು ಅನಾಥ ಪರದೇಶಿಗಳು ಶ್ಯಾಮಲಾ ಮತ್ತು ಆನಂದ್! ಹೂಂ! ಪಾಂಡುರಂಗರಾಯರ ಸಾಲ! ಅದರ ಅರ್ಥ—ಆತ್ಮವಧೆ! ಮಾತೃವಧೆ! ಪಿತೃವಧೆ! ಸಹೋದರ ವಧೆ! ಅಯ್ಯೋ ಪಾಪಿ ಲಲಿತ! ನಿನಗೇತಕ್ಕಾಗಿ ಹುಟ್ಟಿದ ಹಬ್ಬವನ್ನು ಮಾಡಿದರು? ಹಾಗೂ ನಾನಳಿದರೆ ತಂದೆಯ ಸಾಲವು ಅಳಿಯುವುದೋ ಉಳಿಯುವುದೋ ಹೇಳಲಾಗುವುದಿಲ್ಲ. ಅಂತೂ ನನ್ನಿಂದ ಪರಿಹಾರವಿಲ್ಲ. ಬಲವಂತ ವಿವಾಹವು ಪ್ರಮಾದಕರವಾದುದು. ಅದರಿಂದ ನಮ್ಮ ಕುಟುಂಬದ ಸರ್ವನಾಶವುಂಟಾಗುವುದರಲ್ಲಿ ಸಂದೇಹವಿಲ್ಲ. ಹೂಂ! ಲಲಿತ! ನೀನಿದ್ದರೆ ಹೊರೆ! ಸತ್ತರೆ ಹೊರೆ! ಹೀಗೆ ಹೆಣ್ಣಾಗಿ ಹುಟ್ಟಿ ಹೆತ್ತವರಿಗೆ ಹಲವು ತೆರನಾದ ಹೊರೆಯಾಗಬಹುದೇ?

ಸುಮ್ಮನೆ ಯೋಚಿಸಿ ಪ್ರಯೋಜನವೇನು ? ನಮ್ಮೆಷ್ಟು ಜನರಿಗೂ ಜೀವದಾನವಮಾಡತಕ್ಕವನೆಂದರೆ ಆ ಪಾಂಡುರಂಗನೊಬ್ಬನೇ! ಆತನ ಪಾಶದ ಲ್ಲಿಯೇ ನಾವೆಲ್ಲರೂ ಸಿಲುಕಿ ಬಿದ್ದಿರುವೆವು.

ಇದರಮೇಲೆ ಕಂಕಣಪ್ರಾಪ್ತಿ ! ನನ್ನನ್ನು ಆ ಮುದುಕರು ವಿವಾಹ ಮಾಡಿಕೊಳ್ಳುವುದೆಂದರೆ ನನ್ನ ಜನನೀ ಜನಕರಿಗೆ ಒಪ್ಪಿಗೆಯಿಲ್ಲ. ಅದನ್ನು ಅವರ ಬಾಯಿಂದಲೇ ಕೇಳಿಬಲ್ಲೆ. ನನ್ನ ಹಿತಕ್ಕಾಗಿ ಅವರು ತಳಲಿ ಬಳಲು ವುದನ್ನೂ, ನನ್ನ ಸುಖ ಸಂತೋಷಗಳನ್ನು ನೋಡಿ ಹಿಗ್ಗಬೇಕೆಂದು ಕುತೂ ಹಲಪಡುತ್ತಿರುವುದನ್ನೂ ನಾನು ಚೆನ್ನಾಗಿ ಬಲ್ಲೆ. ಆದರೆ ಹಣದ ಮಹತ್ತು ! ಬಡತನದ ಬಲವಾದ ಬಾಧೆ! ಇದರ ಕಟ್ಟಿನಲ್ಲಿ ಸಿಲುಕಿಬಿದ್ದ ನಮ್ಮಾ ಶೋಕಪರಿತಪ್ತ ಕುಟುಂಬ ! ಅಹುದು. ಕಂಕಣ ಪ್ರಾಪ್ತಿ ! ಅದು ಕೇವಲ ದೈವೀಕವಾದುದು. ನನ್ನನ್ನೂ—ನನ್ನ ತಾಯ್ತಂದೆಯರನ್ನೂ—ನನ್ನನ್ನು ವಿವಾಹವಾಗಲಪೇಕ್ಷೆಯುಳ್ಳವರನ್ನೂ — ಎಲ್ಲರನ್ನೂ ಮಿಂಚಿದುದು. ಆದರೆ ಈ ಸಮಸ್ಯೆ ! ವಿಧಿಯ ಪ್ರಬಲಹಸ್ತದಿಂದ ಪ್ರೇರಿತವಾದ ಈ ಬಲವಂತ ವಿವಾಹ—ಇದು ಸಿಲ್ಲಬಲ್ಲುದೇ ?

ನಾನು ಪುಸ್ತಕಗಳಲ್ಲಿ ಓದಿದುದು ಸುಳ್ಳಲ್ಲ. ನಮ್ಮಾ ಸ್ವರ್ಣನಾಡಿನ ಸಹಸ್ರಾರು ನವ ತರುಣಿಯರು ಸಾಮ್ಯವಿಲ್ಲದ ಇಂತಹ ಬಲವಂತ ವಿವಾಹಕ್ಕೆ ತುತ್ತಾಗಿ ಹೋಗಿರುವರು. ಕಾರಣ ? ಅವರನ್ನು ಹೆತ್ತವರನ್ನು ನಾಲ್ಕೂ ಕಡೆ ಆವರಿಸಿದ ಬಡತನದ ಬಲವಾದ ಬಲೆ ! ಧನಮದಾಂಧ ವಂಚಕರ ಪಾಶ ! ಸ್ವಾರ್ಥಪರರಾದ ಹಲವು ವೃದ್ಧರ ಕ್ಷಣಿಕ ಸುಖಾಭಿಲಾಷೆ ! ಯೌವನ ತರುಣಿಯರ ಮಹದಾಕಾಂಕ್ಷೆಗಳನ್ನೂ - ಸತ್ವ ಸೌಂದರ್ಯ ಗುಣಾತಿಶಯಗಳನ್ನೂ ಮಣ್ಣುಗೂಡಿಸುವ - ವರಸಾಮ್ಯವಿಲ್ಲದ – ಉಪದ್ರವ ಕಾರಕ – ಆತ್ಮನಾಶಕ - ಬಲವಂತ ವಿವಾಹಗಳಿಗೆ - ಮನಸ್ಸಿೀ ಉತ್ತೇಜನ ವಿತ್ತು - ಅವು ಅನರ್ಥಕಾರಕವೆಂದು ತಿಳಿಯದೆ, ಅಲಕ್ಷ್ಯಮಾಡುವ ಕ್ಷುಲ್ಲ ಕವಾದ ವೇಷಧಾರೀ ಸಮೂಹ ! ಬಲವಂತ ವಿವಾಹದಅನಿರ್ವಚನೀಯ ಅನಾಹುತಗಳಿಗೆ ಇವುಕಾರಣ. ವಿಷಬೀಜಗಳನ್ನು ಯಾರು ಬೇಕಾದರೂ ಚೆಲ್ಲಿಬಿಡಬಹುದು. ಆದರೆ ಅವು ಮೊಳೆತು ವೃಕ್ಷಗಳಾಗಿ - ಫಲಭರಿತವಾ ದರೆ - ಆ ವಿಷ ಫಲಗಳನ್ನು ಭುಜಿಸಲು ಯಾರು ಸಿದ್ಧರಾಗಿರುವರು?

ಇನ್ನೇಕೆ ಈ ಕಂಕಣ ಪ್ರಾಪ್ತಿಯ ಪ್ರಸ್ತಾಪ? ಇಂದು ನನಗೆ ಕಂಕಣ ಪ್ರಾಪ್ತಿಯೆಂದರೆ ಅದು ಕೆರೆಯಲ್ಲಿ—ಭಾವಿಯ ತಳದಲ್ಲಿ—ಆಲದ ಮರದ ರೆಂಬೆಯಲ್ಲಿ—ಅಥವಾ ವಿಷಪಾನದಲ್ಲಿ ಕಲೆತ ಆತ್ಮಹತ್ಯೆಯಲ್ಲಿ. ಅದು ಬಲವಂತ ವಿವಾಹದ ಪ್ರಥಮ ಪ್ರತಿಫಲ! ಅದಕ್ಕೆ ಪ್ರತಿಯಾಗಿ ವಿವಾಹವೇ ತಪ್ಪಿದರೆ ಅದನ್ನನುಸರಿಸಿದ ಎಲ್ಲ ಕಷ್ಟಗಳೂ ಮಾಯವಾಗುವುವಲ್ಲವೆ? ಆಗಲಿ. ತಂದೆಯನ್ನು ಋಣಮುಕ್ತನನ್ನಾಗಿ ಮಾಡುವುದು. ಬಲವಂತ ವಿವಾಹದ ಪ್ರಯತ್ನವನ್ನು ಅಳಿಯುವುದು. ಇವೆರಡೂ ಆ ಪಾಂಡುರಂಗನ ಕೈಯಲ್ಲಿಯೇ ಅಡಗಿರುವುವು. ಈಗ ನಾನು ಆ ಪಾಂಡುರಂಗನನ್ನೇ ಶರಣು ಹೊಕ್ಕು ಈ ಕುಟುಂಬಕ್ಕೆ ಜೀವದಾನವನ್ನು ಕರುಣಿಸಬೇಕೆಂದು ಕೋರುವೆನು. ತನ್ಮೂಲಕ ಶಾಂತಿಯ ಭಿಕ್ಷೆಯನ್ನೂ ಸಹ ಬೇಡುವೆನು. ಈ ಪ್ರಯತ್ನಕ್ಕೆ ತಾಯ್ತಂದೆಯರ ಆಶೀರ್ವಾದ ಬಲ! ನನ್ನ ದೃಢ ಪ್ರಯತ್ನದ ಬಲ! ದೈವ ಸಹಾಯ! ಆಗಲಿ.

(ಹೊರಡುವಳು)



ದೃಶ್ಯ ೧೨]                                                    [ಸ್ಥಾನ : ಬೀದಿ.

(ಪಾತ್ರಗಳು : ನಾರಾಯಣ, ಮುಕುಂದ್, ಧರಣಯ್ಯ)

ನಾ:—(ಸ್ವಗತ) ಅಂತೂ ಈ ಮದುವೇ ನಿಶ್ಚಯಾ ಇಂಗೇಂತ ಏಳಾಕಾಗಾಕಿಲ್ಲ. ಗಳಿಗ್ಗಳಿಗ್ಗೆ ನನ್ನೋಡಿಸ್ತಾರೆ ಮುಕುಂದಪ್ಪಾವರತಾಕೆ. ಅವರು ಆವೊತ್ತು ಬತ್ತೀನೀ ಅಂದೋರು ನಮ್ಮೆಜಮಾನರ ತಾವ ಬರ್ನಿಲ್ಲ. ನಮ್ಮೆಜಮಾನ್ರೋ ಉರಿದುರಿದು ಬೀಳ್ತಾ ಅವ್ರೆ. 'ಎಣ್ಣು ಕೊಟ್ಟು ನೆಗ್ನ ಮಾಡ್ತೀನೀಂತ ಕಂಡೀರ್ಸ ಮೇಲಲ್ವಾ ಎರಡು ಸಾವಿರ ಸಾಲ ತೆಕ್ಕೊಂಡಿದ್ದು ಮುಕುಂದಪ್ನೋರು? ಅಣ ತೆಕ್ಕೊಂಡು ಮದುವೇಗೆ ತಕರಾರು ಮಾಡಿದ್ರೆ ನಾ ಸುಮ್ಕೇ ಬುಟ್ ಬುಡ್ತೀನಾ? ದಾವಾ ಊಡಿ, ಜಪ್ತಿ ಮಾಡುಸ್ಬುಡ್ತೀನೀಂತ ಏಳ್ತಾ ಅವ್ರೆ. ಅಂತೂ ಬಲವಂತದ ನೆಗ್ನ! ಎಂಗಾರಾ ಆಗ್ಲಿ. ಇನ್ನು ನಾನೋಗಿ ಆ ಮುಕುಂದಪ್ಪಾವರ್ನ ಎಜಮಾನ್ರು ಬರೇಳಿದ್ರೂಂತ ಏಳ್ಬುಟ್ಟು ಬಾಕೀ ವಸೂಲೀಗೆ ಓಗ್‌ಬೇಕು. ಆಂ! ಅವರೇ ಬತ್ತವರಲ್ಲಾ!

(ಪ್ರವೇಶ : ಮುಕುಂದ್)

ನಾ:—ಶರಣು ಬುದ್ಧಿ! ತಮ್ ತಾಕ್ಕೇ ಕಳಿಸಿದ್ರು ಎಜಮಾನ್ರು.

ಮು:—ಏನು ವಿಷಯ?

ನಾ:—ಅದೇ ಬುದ್ಧಿ! ಆವೊತ್ತು ಬತ್ತೀನೀಂತ ತಾವೇಳಿದ್ರಲ್ಲಾ. ಬರ್ನಿಲ್ಲವಲ್ಲಾ ಯಾಕೆ? ಯಾವಾಗ ಬತ್ತಾರೇಂತ ಎಲ್ಲಾ ಕೇಳ್ಕೊಂಡು ಬರೇಳಿದ್ರು ಬುದ್ಧಿ!

ಮು:—ಮನೇಲ್ಲಿ ಎಲ್ಲರೂ ಅಸ್ವಸ್ಥ. ಬರೋದಕ್ಕಾಗಲಿಲ್ಲ. ನಾಳೆ ಬರ್ತಾರಂತೆ ಅಂತ ಹೋಗಿ ಹೇಳಪ್ಪ.

ನಾ:—ಅಪ್ಪಣೆ ಬುದ್ಧಿ! (ಹೊರಡುವನು)

ಮು:—(ಸ್ವಗತ) ಹೊಂ! ಪಾಂಡುರಂಗನ ವರಾತು ಬೇರೆ ಹೆಚ್ಚಿಹೋಯಿತು. ಈತನಿಂದ ಯಾತಕ್ಕಾದ್ರೂ ಸಾಲವನ್ನು ತಂದೆನೋ ಗೊತ್ತಿಲ್ಲವಲ್ಲಾ? ಈತನನ್ನು ಮದುವೆ ಮಾಡಿಕೋ ಎಂದು ಲಲಿತೆಯನ್ನು ಬಲವಂತ

ಪಡಿಸಲೇ ? ಛೀ ! ಆಗ ಲಲಿತೆಯು ಪ್ರಾಣವನ್ನು ತೊರೆಯುವಳು. ಕೊಟ್ಟ ಮಾತನ್ನು ನೆರವೇರಿಸದಿರಲೆ ? ಆಗ ಪಾಂಡುರಂಗನು ಸಾಲಕ್ಕಾಗಿ ನನ್ನನ್ನು ಹಿಂಸಿಸುವನು. ಅಂತೂ ಈ ಸಾಲದ ಇಕ್ಕಟ್ಟಿನಲ್ಲಿ ನಮ್ಮೆಲ್ಲರ ಹಿತವೂ ಹೊತುಹೋಗಿದೆ. ಈ ಸಂಸಾರದ ಸಂಪೂರ್ಣ ನಾಶಕ್ಕೆ ಕಾರಣವೆಂದರೆ ಈ ಸಾಲ — ಅದರ ಪರಿಣಾಮವಾದ ಬಲವಂತ ವಿವಾಹ ! ಈಗೇನು ಮಾಡಲಿ ? ಹೂಂ ! ಪಾಂಡುರಂಗ ! ಇದೆಂತಹ ಕಠಿಣ ಪ್ರಸಂಗದಲ್ಲಿ ನನ್ನನ್ನು ಸಿಲುಕಿಸಿದೆ ? ಆಹಾ ! ವಿಚಿತ್ರ ಸಮಸ್ಯೆ ! ಆಯುಷ್ಯಾಂತವೂ ಲಲಿತೆಯ ಜೀವನವನ್ನು ಶೋಕಕಲುಷಿತವನ್ನಾಗಿ ಮಾಡಲೆ ? ಛೀ ! ಸಲ್ಲದ ಮಾತು ! ಹೂಂ! ಎಲ್ಲ ಸಾಲಗಳೊಂದಿಗೆ ಪಾಂಡುರಂಗನ ಸಾಲವೂ ಒಂದಾಗಲಿ. ನಷ್ಟವೇನು ? ತೀರ ಮುಳುಗಿಹೋದವನಿಗೆ ಛಳಿಯೇನು ? ಘಾಳಿಯೇನು ? ಲಲಿತೆಯನ್ನು ಈ ಮುದುಕನಿಗೆ ವಿವಾಹ ಮಾಡಿಕೊಡಲು ನಾನು ಸಮ್ಮತಿಸಲಾರೆ. ಪಾಂಡುರಂಗ ! ನನ್ನನ್ನು ಪಾರುಮಾಡುವ ಭಾರವು ನಿನ್ನದಾಗಿರಲಿ. (ಹೊರಡಲು ಸಿದ್ಧನಾಗುವನು)

(ಪ್ರವೇಶ : ದಿನಸಿ ಅಂಗಡಿ ಧರಣಯ್ಯ)

ಧ:—ನಿಲ್ರೀ ! ನಿಲ್ರಿ ಮುಕುಂದರಾಯರೆ !

ಮು:—(ಸ್ವಗತ) ಇದ್ಯಾರು ? (ತಿರುಗಿನೋಡಿ) ಧರಣಯ್ಯ ! ದಿನಸಿಅಂಗಡಿಯವನು ! ಯಮನಿಗಾದ್ರೂ "ಒಂದು ನಾಲ್ಕು ದಿವಸ ತಡೆದು ಬಾ" ಎಂದು ಹೇಳಬಹುದು. ಈ ಮಹರಾಯನಿಗೆ ಸಮಾಧಾನ ಹೇಳುವುದು ಸಾಧ್ಯವಿಲ್ಲ ಬರುವಾಗಲೇ ಸಿಂಹ ಘರ್ಜನೆ ಮಾಡಿಕೊಂಡು ಬರ್ತಾನೆ. ಕೈಯಲ್ಲಿ ಮೂರು ಬಿಡಿಕಾಸಿಲ್ಲ. ಇನ್ನೀತನಿಗೇನೆಂದು ತಾನೇ ಪ್ರತ್ಯುತ್ತರ ಹೇಳಲಿ ?

ಧ:—(ಪ್ರವೇಶಿಸಿ) ಆದರೂ ಮನುಷ್ಯನಿಗೆ ನಾಲಿಗೆ ಒಂದಲ್ವೇನ್ರಿ ?

ಮು:—ಯಾರಿಲ್ಲಾಂದವರು ಸ್ವಾಮಿ ?

ಧ:—ಅಲ್ರೀ ! ಅವತ್ತೀನಂದ್ರೀ ಬಾಕೀಗೆ? ಕೊಡ್ತೀನೀಂತ ಹೇಳಿದಿರಲ್ರೀ ?

ಮು:—ಬಂದತಕ್ಷಣ ಕೊಟ್ಟುಬಿಡ್ತೀನಿ ಸ್ವಾಮಿ! ನಿಲ್ಲಿಸಿಕೊಳ್ಳೋದಿಲ್ಲ. ಯಾರ ಬಾಕಿ ನಿಂತರೂ ನಿಲ್ಲಲಿ. ನಿಮ್ಮ ಬಾಕಿ ಮಟ್ಟಿಗೆ ನಿಲ್ಲಿಸಿಕೊಳ್ಳೋದಿಲ್ಲ ಧರಣಯ್ಯನವರೆ! ಸದ್ಯಕ್ಕೆ ಯಾವುದೂ ಬರಲಿಲ್ಲ.

ಧ:—ಯಾವತ್ತೀ ಬರೋದು ನಿಮಗೆ? ಬಂದ ತಕ್ಷಣ ಕೊಡ್ತಾರಂತೆ! ಏನು ಬರೋದು? ಕೇಡುಗಾಲ!

ಮು:—ಸ್ವಾಮಿ! ಧರಣಯ್ಯನವರೆ! ಈಗ ನನಗೆ ಬಂದಿರೋ ಕೇಡುಗಾಲಸಾಲದೆ ಸ್ವಾಮಿ? ಇನ್ನಿದಕ್ಕಿಂತ ಹೆಚ್ಚಾದ ಕೇಡುಗಾಲ ಬರಬೇಕೊಂತಲೇ ಸ್ವಾಮಿ ನೀವು ಹೇಳೋದು?

ಧ:—ಹಾಗಾದರೆ ನನ್ನ ಬಾಕಿ ಬಂದಹಾಗೇ ಆಯ್ತು!

ಮು:—ಅಂದರೆ ನಾನೇನು ಕಳ್ಳನೆ ಸ್ವಾಮಿ? ನಿಮ್ಮ ಬಾಕೀಗಾಗಿ ಊರು ಬಿಟ್ಟು ಓಡಿಹೋಗಲೇ?

ಧ:—ಕಳ್ಳರ ತಾತ ಅನ್ನಯ್ಯ! ಕಳ್ಳನಂತೆ ಕಳ್ಳ! ಕಂಡವರ ಒಡವೆ ನುಂಗೋವ್ರು ಕಳ್ರಲ್ಲದೆ ಮತ್ತೇನೊಂತ? ಇದ್ದ ಕೆಲಸಕ್ಕೆ ಕಲ್ಲುಹಾಕಿಕೊಂಡದ್ದು ಯಾಕಯ್ಯಾ? ಅದೇನಂಥಾ ಗ್ರಹಚಾರ ನಿನಗೆ ಹಿಡಿದಿದ್ದೊಂತ? ಸಾಚಾವಾಗಿದ್ರೆ ನಿನ್ನೋಡಿಸ್ತಾ ಇದ್ರೆ ಕೆಲಸಬಿಟ್ಟು?

ಮು:—ಸ್ವಾಮಿ! ನೀವೆಲ್ಲಾ ತಿಳಿದವ್ರು! ನಿಮ್ಮುತ್ತರ ಹೆಚ್ಚು ಮಾತೇಕೆ? ನನ್ನ ಬಾಕಿ ಎಷ್ಟು ಹೇಳಿ.

ಧ:—ರೂ. 56–7–8. ಕೊಟ್ಟುಬಿಡು ಅತ್ತಲಾಗೆ. ಯಾಕೀ ಪಂಚಾಂಗಾ?

ಮು:—ಒಂದು ಕಾಗದದಲ್ಲಿ ಗುರುತುಹಾಕಿ ಕೊಡಿ ಸ್ವಾಮಿ!

ಧ:—ಗುರುತು ಹಾಕಿಕೊಟ್ರೆ?

ಮು:—ಇನ್ನೊಂದು ತಿಂಗಳ ಕಾಲದಲ್ಲಿ ಬೇಬಾಕಿಯಾಗಿ ತೀರಿಸಿಬಿಡ್ತೇನೆ.

ಧ:—ಆಗೋಲ್ಲಾಯ್ಯಾ! ಮನೇಲ್ಲಿ ಯಾವುದಾದ್ರೂ ನಗೆನಟ್ಟೆದ್ರೆ ಮಾರಿ ತಂದುಕೊಡು.

ಮು:—ಅದಿದ್ರೆ ನಿಮ್ಹುತ್ತರ ಇಷ್ಟು ಹೊತ್ತು ನಿಂತ್ಕೊಂಡು ಯಾರು ಮಾತಾಡ್ತಾ ಇದ್ರು ಸ್ವಾಮಿ ?

ಧ:—ಹಾಗಾದ್ರೆ ಸಾಧ್ಯವಿಲ್ಲಾಯ್ಯಾ ! ಸಾಧ್ಯವೇ ಇಲ್ಲಾಂದೆ. ಇನ್ನನ್ನಿಂದ ತಡಿಯೋಕೆ ಸಾಧ್ಯವಿಲ್ಲ. ಯಾರಕಾಲಿಗಾದ್ರೂ ಬಿದ್ದು ಹಣ ತಂದು ಮೊದಲು ಫೈಸಲ್ ಮಾಡಯ್ಯಾ ! ಅಕ್ಕೀ ಬೇಳೆ ಎಲ್ಲಾ ತಕ್ಕೊಂಡು ಹೆಂಡತೀ ಮಕ್ಕಳೂ ಎಲ್ಲರೂ ತಿಂದು ತೇಗಿದಾಗ ಸವಿಯಾಗಿತ್ತು. ಕೊಟ್ಟ ಸಾಲ ಮತ್ತೆ ಕೇಳಿದ್ರೆ ಈಗೊಂದು ಪಕ್ಷ ಕಹಿಯಾಗಿರುತ್ತೆ ಅಲ್ಲವೆ ? ಯಾವಾಗ ಕೇಳಲಿ ಇವತ್ತು, ನಾಳೆ. ಇದೇ ಸಬೂಬೇನೋ ? ಯಾರಕೈಲಿ ಸಾಧ್ಯ ಈ ಗೋಳು ಕೇಳ್ಕೊಂಡಿರೋದಕ್ಕೆ ? ಅಲ್ಲ, ತಿಂದ ಅನ್ನವಾದರೂ ವೈಗಂಟತ್ತೆಯೇನಯ್ಯಾ ! ಬಾಕಿ ಇಟ್ಟು ಮಾತಾಡಯ್ಯಾ ! ಸುಮ್ಮನೆ ಯಾತಕ್ಕೆ ಈ ಪಂಚಾಯಿತಿಕೆ ಎಲ್ಲಾ !

ಮು:—ನಿಮ್ಮನ್ನು ಬೇಡಿಕೋತೀನಿ ಸ್ವಾಮಿ ! ಸುಮ್ಮನೆ ಸಿಕ್ಕಾಪಟ್ಟೆ ನಡು ಬೀದೀಲಿ ಮಾನಾ ಕಳೀಬೇಡೀಂದ್ರೆ. ಒಂದು ತಿಂಗಳು ಸುಧಾರಿಸಿ.

ಧ:—ಒಂದು ತಿಂಗಳಿಲ್ಲ. ಒಂದು ದಿನವಿಲ್ಲ. ಇನ್ನೊಂದು ನಿಮಿಷವೂ ಸಾಧ್ಯವಿಲ್ಲಾಯ್ಯಾ ! ನಿನ್ನಂಥಾವರು ನಾಲ್ಕು ಜನಾ ಗಿರಾಕಿ ಸಿಕ್ಕಿಬಿಟ್ರೆ ನನ್ನ ವ್ಯಾಪಾರಕ್ಕೇನೂ ಕಮ್ಮಿ ಇಲ್ಲ. ಯಾವುದಾದ್ರೂಮಾಡಿ ಬಿಸಾಕಯ್ಯಾ ನನ್ನ ಬಾಕಿ. ನಿನ್ಯಾರು ಕಟ್ಟಿಕೊಂಡು ಅಳ್ತಾರಾಮೇಲೆ ?

ಮು:—ಧರಣಯ್ಯನವರೇ ! ನಾನೂ ತೀರಾ ಕೆಟ್ಟು ಹೋಗಿದ್ದೇನೆ. ನಿಮ್ಮ ಕಾಲಿಗೆ ಬೀಳ್ತೀನೆ. ಒಂದು ತಿಂಗಳು ಕಾಲ ದೊಡ್ಡ ಮನಸ್ಸುಮಾಡಿ ಸುಧಾರಿಸಿ ಸ್ವಾಮಿ !

ಧ:—ಅಲ್ಲಿಗೆ ಬಟುವಾಗಿ ಅರುವತ್ತು ರೂಪಾಯಿ ತಕ್ಕೊಂಡು ಬಾ.

ಮು:—ಯಾಕೆ ಸ್ವಾಮಿ. ಅರುವತ್ತು ? 56 ಚಿಲ್ಲರೆ ಅಂತ ಹೇಳಿದಿರಿ.

ಧ:—ಬಡ್ಡಿ ? ನಿಮ್ಮ ಮನೆ ಬಾಗಿಲಿಗೆ ತಿರುಗಿದ ಕೂಲಿಯಾಗಲಿಲ್ಲ.



ದೃಶ್ಯ ೧೩] [ಸ್ಥಾನ: ಪಾಂಡುರಂಗನ ಮನೆ

(ಪಾತ್ರಗಳು : ಪಾಂಡುರಂಗ, ನಾರಾಯಣ, ಲಲಿತೆ)

ಪಾಂ:—ಲೋ ನಾರಾಯಣಾ ! ನಾರಾಯಣಾ !

ನಾ:—ಬುದ್ಧಿ !

ಪಾಂ:—ಎಲ್ಲೋ ಮುಕುಂದರಾಯರು ಬಂದ್ರೇನೋ ?

ನಾ:—ಇದ್ಯಾಕಾ ಬುದ್ಧಿ ! ನನ್ನ ಕೇಳ್ತಿದ್ದೀರ್ಯಲ್ಲಾ ? ಬರ್ಲಿಲ್ವಾ ಅಂಗಾರೆ ತಮ್ಮನ್ನ ಕಾಣಿಸಿಕೊಳ್ಳಾಕೇ ? ಅವತ್ತೇ ಬತ್ತೀನೀಂತ ಏಳಿದ್ರಲ್ಲಾ ?

ಪಾ:—ಬರಲೂ ಇಲ್ಲ. ಗಿರಲೂ ಇಲ್ಲ. ಅಲ್ಲ, ಇದೇ ನೋಡು– ಜನಗಳಿಗೆ ಮಾತಿನ ಮೇಲೆ ದೃಷ್ಟಿ ಸಾಲದೂನ್ನೋದು. ಸಾಲ ತಕ್ಕೊಳ್ಳೋವಾಗ ಅಷ್ಟು ಓಡಿಯಾಡಿ ಬಿಟ್ಟ ಮನುಷ್ಯ. ಈಗ ಮಗಳನ್ನು ನನಗೆ ಮದುವೇ ಮಾಡಿಕೊಟ್ಟು, ಮಾತು ಉಳಿಸ್ಕೋಬೇಕೂನ್ನೋ ಜ್ಞಾನವಿದೆಯೋ ಆತನಿಗೆ ? ಅಲ್ಲ, ಇದ್ಯಾಕೇ ನನ್ನೆಲ್ರೂ ಹೀಗೆ ಪೀಡಿಸ್ತಾ ಇದ್ದಾರೇಂತ ? ಹಾಗಾದ್ರೆ ಸಮಯಕ್ಕೆ ಸಾಲ ಕೊಟ್ಟಿದ್ದೇ ನನ್ನ ತಪ್ಪೇ ?

ನಾ:—ಅವರಿಗೂ ತೊಂದರೆ ತಾಪತ್ರಯಗೋಳು ಪಾಪ ! ಅವರು ಆಡಿದ ಮಾತಿಗೆ ತಪ್ಪೋವ್ರಲ್ಲ ಬುದ್ಧಿ! 'ಮನೆಯಾಗೆ ಎಲ್ಲಾ ಕಾಯಿಲೆ ಆಗವ್ರೆ ಬುಡುವಿಲ್ಲ' ಅಂತಂದ್ರು ಅವತ್ತೇ ನನ್ಕೂಟ. ಇನ್ನಿದರಮೇಕ್ಕೆ ಅವರ ಸಂದರ್ಬ ಎಂಗೆಂಗಿರಬೋದೋ ? ಕಂಡವ್ರು ಯಾರು ಬುದ್ಧಿ ?

ಪಾಂ:—ಆದರೂ ಬರಬರತಾ ಅತನ ಮಾತಿನಲ್ಲಿ ನೆಚ್ಚಿಕೇನೇ ಕಮ್ಮಿಯಾಗ್ತಾ ಬಂತು. ಅಲ್ಲ,ಹಣವಂತನಿಗೆ ಹೆಣ್ಣು ಕೊಟ್ಟು ಮದುವೆ ಮಾಡೋದೂಂ ತಂದ್ರೆ ಒಂದಲೀತಾರೇ–ಹಾಗಲೀತಾರೆ ಹೆತ್ತವರು. ಹೇಗಾದ್ರೂ ತಮ್ಮ ಮಗಳಿಗೆ ಹಣಗಾರನಾದ ಗಂಡ ಸಿಕ್ಕಬೇಕಲ್ಲಾಂತ ! ಹೀಗಿರಬೇಕಾದ್ರೆ, ಈತ ನೋಡಿದ್ರೆ ಇಷ್ಟು ತಾತ್ಸಾರ ! ಅಲ್ಲವೋ ನಾರಾಯಣಾ !

ನಾ:— ಬುದ್ಧಿ !

ಪಾಂ:—ನೀನ್ಹೋಗಿ ಹೇಳಿದೆಯೇನೋ ಅವತ್ತು ಮುಕುಂದರಾಯರಿಗೆ—
ನಾನು ಬರಹೇಳಿದೇಂತ ?

ನಾ:—ಇದ್ಯಾಕಾ ಬುದ್ಧಿ ! ಅಂಗಾರೆ ಏಳ್ನಿಲ್ಲವ್ರಾ ? ತವ್ ಪಾದದಾಣೆಗೂ ಏಳ್ದೆ ಬುದ್ಧಿ !

ಪಾಂ:—ಲಗ್ನ ನಿಶ್ಚಯ ಮಾಡೋಡಕ್ಕೆ ಬರಹೇಳಿದ್ರೂಂತ ಹೇಳಿದೆಯೇನೋ?

ನಾ:—ಔದೂ ಬುದ್ಧಿ ! ಅಂಗಂತ್ಲೇ ಅಲ್ಲವ್ರಾ ನಾ ಏಳಿದ್ದು ?

ಪಾಂ:—ಅದಕ್ಕೇನಂದ್ರೋ ಅವರು ?

ನಾ:—ನಾಳೇನಾಡಿದ್ದು ಬತ್ತೀನೀಂತಂದ್ರು. ಅಂಗಂತ ಮೊದಲೇ ಅರಿಕೆ ಮಾಡ್ಕೊಂಡ್ನೆಲ್ಲಾ, ಬುದ್ಧೀ !

ಪಾಂ:—ಕಂಡಕಂಡ ಹಾಗೆ ಅಪಶಕುನ ಆಗಿಹೋಗಿ ಬಿಟ್ಟಿದೆ ಈ ಮದುವೇಗೆ.

ನಾ:—ಆಯ್ಯೋ, ತಾವು ಕಂಕಣ ಕಟ್ಟಬೇಕು ಆ ಉಡಿಗೇಗೇಂದ್ರೆ—ತೆಪ್ಸೋಕೆ ಯಾರ ಕೈಲಾಯ್ತದೆ ? ಬುಡಿ ಬುದ್ಧಿ ! ಎಲ್ಲೋರಿಗೂ ದೊಡ್ಡೋನು ಬಗವಂತ ಒಬ್ಬನವ್ನೆ! ವೇಳೆ ಬಂತ್ರೂಂತಂದ್ರೆ ಎಲ್ಲಿದ್ರೂ ಉಡುಕ್ಕೊಂಡು ಬತ್ತೈತೆ.

ಪಾಂ:—ಅದು ಸರೀನ್ನೂ ! ಆದ್ರೂ ಈತ ಬರದೇ ಇರೋದಕ್ಕೆ ಕಾರಣ ?

ನಾ:—ಬುದ್ಧಿ ! ತಡೀರಿ ಬುದ್ಧಿ !

ಪಾಂ:—ಯಾಕೋ ?

ನಾ:—ಅವರೇ ಬತ್ತವ್ರೆ ಬುದ್ಧಿ !

ಪಾಂ:—ಯಾರೋ ?

ನಾ:—ಅವರೇ ಬುದ್ಧಿ !

(ಲಲಿತೆಯ ಪ್ರವೇಶ)

ಲಲಿತವ್ನೋವ್ರು ಬುದ್ಧಿ !

ಪಾಂ:—ಹೌದೇ ? ಸುಳ್ಳು ಹೇಳ್ತಿದ್ದಿಯೇನೋ ? ಅಲ್ಲವೊ ಇದೇನು, ಲೇವಡೀನೋ ಇದು ?

ನಾ:—ಇದ್ಯಾಕಾ ಬುದ್ಧಿ ? ಎಲ್ಲಾದ್ರೂ ಸಂಸಯವಾ ?

(ಲಲಿತೆಯೂ ಹತ್ತಿರ ಬರುವಳು)

ಪಾಂ:—ಲೋ ನಾರಾಯಣ! ರತ್ನಕಂಬಳಿ ತಂದು ಹಾಸೋ ಕೂತ್ಕೊಳ್ಳಲಿ. (ಲಲಿತೆಯನ್ನು ನೋಡಿ) ಕೂತ್ಕೋ, ನಿಂತಿದ್ದೀಯಲ್ಲಾ! ಅಂತೂ....

ಲಲಿತ:—ಈಗ ವಿರಾಮವಿಲ್ಲ. ಬೇಗ ಹೋಗಬೇಕು.

ಪಾಂ:—ಅಯ್ಯೋ, ಬಂದಪ್ಪೇನು? ಆಗಲೇ ಹೋಗ್ತೀನೀ ಅನ್ನೋದೇನು?

ಲಲಿತ:—ಎಲ್ಲಿ? ಸನ್ನ ತಂದೆ! ಅವರಿರುವರೆ?

ಪಾಂ:—ಇಲ್ಲ; ಏಕೆ?

ಲಲಿತ:—ಅವರನ್ನು ಹುಡುಕಿಕೊಂಡು ಇಲ್ಲಿಗೆ ಬಂದೆ.

ಪಾಂ:—ಬಾಂ! ಇಲ್ಲಿ ಬರ್ತೀನೀಂತ ಹೇಳಿದ್ರು?

ಲಲಿತ:—ಹಾಗಾದ್ರೆ ನನ್ನ ತಂದೆಯು ಇಲ್ಲಿಯೂ ಇಲ್ಲವೆ?

ಪಾಂ:—ಇದೇನು? ಯಾಕೆ ಹೀಗೆ ಘಾಬರಿ?

ಲಲಿತ:—ಇನ್ನಾಯಿತು. ನಮ್ಮ ಜೀವನವು ಮುರಿಯಿತು. ಅಪ್ಪಾ! ಅಪ್ಪಾ! ನೀನು ಆತ್ಮಹತ್ಯೆ ಮಾಡಿಕೊಂಡೆಯಾ? ಅಯ್ಯೋ ಲಲಿತ! ನಿರ್ಭಾಗ್ಯೆ ಲಲಿತ! ಹೆಣ್ಣಾಗಿ ಹುಟ್ಟಿ ಹೆತ್ತವರಿಗೆ ಹೊರೆಯಾದೆಯಾ? ಹೆತ್ತ ತಂದೆಗೆ ಮೃತ್ಯುವಾದೆಯಾ? ಅಯ್ಯೋ! (ಎಂದು ಅಳುವಳು.)

ಪಾ:—(ಘಾಬರಿಯಿಂದ) ಏನಿದು? ನಿನ್ನ ತಂದೆ! ಆತ್ಮಹತ್ಯೆ! ಲಲಿತ! ಹೇಳು; ಬೇಗಹೇಳು. ಏತಕ್ಕೆ?

ಲಲಿತ:—ಅಪ್ಪಾ! ಅಪ್ಪಾ! ಕೊನೆಗೂ ನೀನು ನಮ್ಮನ್ನು ಬಿಟ್ಟು ನಡೆದೆಯಾ? ಇನ್ನಾರು ನಮಗೆ ಗತಿ? ಎಷ್ಟು ಹುಡುಕಿದರೂ ನನ್ನ ಕಣ್ಣಿಗೆ ಕಾಣಲಿಲ್ಲವೇಕೆ? ಪರಮಾತ್ಮ! ನನ್ನ ತಂದೆಯೆಲ್ಲಿ? ಅಮ್ಮನಿಗೇನೆಂದು ಹೇಳಲಿ? ಅಯ್ಯೋ ಪಾಪಿ ಲಲಿತ!

ಪಾಂ:—ಇದೇನು ಲಲಿತ! ವಿಚಾರವೇನು?

ಲಲಿತ:—ಅಯ್ಯೋ! (ಎಂದು ಮತ್ತೆ ಅಳುವಳು)

ಪಾಂ:—ಅಯ್ಯೋ ದೇವ್ರೆ! ಏನು ಮಾಡಲಪ್ಪಾ? ಲಲಿತ! ಹೇಳು. ಏನು ಸಮಾಚಾರ?

ಲಲಿತ:—ಅಪ್ಪ ! ಸಾಲ ! ಚಿಂತೆ ! ನಿನ್ನೆ ಹೋದವ್ರು ಬರಲಿಲ್ಲ. ಅಯ್ಯೋ ಅಪ್ಪ ! ಅಪ್ಪ ! ನೀರು, ದಾಹ !

ಪಾಂ:—ಹುಂ ! ಏನು ಮಾಡಲಿ ? ಲೋ ನಾರಾಯಣ ! ಏನಾದ್ರೂ ತಕ್ಕೊಂಡು ಬಾರೋ ಕುಡಿಸೋದಕ್ಕೆ !

ನಾ:—ಸೋಡಾ ತರಲೋ ? ಲಿಮ್ಲೇಟ್ ತರಲೋ ಬುದ್ಧಿ !

ಪಾಂ:—ಯಾವುದಾದ್ರೂ ತಕ್ಕೊಂಡು ಬಾರೋ-ಅಯ್ಯೋ, ಏನು ಮಾಡಲಿ?

ಲಲಿತ:—ಅಪ್ಪ ! ಕ್ಷಮಿಸು. ನನ್ನದು ತಪ್ಪು ! ನಾನು ನಿನ್ನ ಮಗಳಾಗಿ ಹುಟ್ಟದಿದ್ದರೆ ನಿನಗೇತಕ್ಕೆ ಈ ಕಷ್ಟಗಳು ? ಅಪ್ಪ ! ನಾನೂ ಬರುತ್ತೇನೆ. ಅಪ್ಪ !

ಪಾಂ:—(ಪಾನೀಯವನ್ನು ಲಲಿತೆಗೆ ಕುಡಿಸಿ) ಲಲಿತ ! ನಿನ್ನ ಚಿಂತೆಯೇನು ? ನಿನ್ನ ತಂದೆಯೇತಕ್ಕೆ ಪ್ರಾಣಹತ್ಯೆ ಮಾಡಿಕೊಳ್ಳಬೇಕು ? ಇಲ್ಲ, ಇಲ್ಲ; ಸುಳ್ಳು. ನಿನಗೆ ಭ್ರಮೆ !

ಲಲಿತ:—ಇಲ್ಲ, ಅವರು ಸತ್ತಿರಬೇಕು. ಇಲ್ಲದಿದ್ದರೆ ಅವರನ್ನು ಇಲ್ಲಿಯೂ ಕಾಣದಿರಲು ಕಾರಣ ?

ಪಾಂ:—ಲಲಿತ! ಸ್ವಲ್ಪ ಸಮಾಧಾನಕ್ಕೆ ತಂದ್ಕೋ ಮನಸ್ಸನ್ನ. ನಿನ್ನ ತಂದೆ ಒಂದು ಸಮಯ ಇಲ್ಲಿಗೆ ಬಂದರೂ ಬರಬಹುದು.

ಲಲಿತ:—ನಾನು ನಂಬಲಾರೆ. ಅವರು ಪ್ರಾಣವನ್ನು ತೊರೆದಿರಲೇಬೇಕು. ಅಯ್ಯೋ, ಅಪ್ಪ ! ಅಪ್ಪ !

ಪಾಂ:—ಇಲ್ಲ, ಲಲಿತ ! ಅವರೇಕೆ ಪ್ರಾಣಹತ್ಯೆಮಾಡಿಕೊಳ್ಳಬೇಕು ?

ಲಲಿತ:—ತಮ್ಮ ಕಷ್ಟ ಹರಿಸಿಕೊಳ್ಳುವುದಕ್ಕೆ.

ಪಾಂ:—ಲಲಿತ ! ಏನು ಆ ಕಷ್ಟ ? ಹೇಳು. ಮರೆಮಾಚಬೇಡ. ಅದನ್ನು ನಾನು ಹರಿಸುತ್ತೇನೆ.

ಲಲಿತ:—ಈ ಮಾತು ನಿಜವೇ ? ನಮ್ಮ ಕುಟುಂಬದ ಸಂಕಟವನ್ನು ಹರಿಸಲು ತಮಗೆ ಇಷ್ಟವಿದೆಯೇ ?

ಪಾಂ:—ಉಂಟು. ಲಲಿತ ನಿನ್ನ ಅಭೀಷ್ಟವನ್ನು ಹೇಳು. ನಿನ್ನ ಸಲು ವಾಗಿ ಯಾವುದನ್ನು ಮಾಡುವುದಕ್ಕೂ ನಾನು ಸಿದ್ಧ!

ಲಲಿತ:—ನಾನು ನಂಬಲಾರೆ. ನಮ್ಮ ಕಷ್ಟಗಳನ್ನು ಆ ಪಾಂಡುರಂಗ ದೇವ ನೊಬ್ಬನೇ ಹರಿಸಬಲ್ಲ. ಇನ್ನು ನಾನು ಹೊರಡಬೇಕು. ನನ್ನ ತಂದೆಯ ಗತಿ ಏನಾಯಿತೋ? (ಎಂದು ಹೊರಡಲು ಸನ್ನದ್ಧಳಾಗುವಳು.)

ಪಾಂ:—ಲಲಿತ! ಕುಳಿತುಕೋ! ನಿನ್ನನ್ನೂ ನಿನ್ನ ತಂದೆಯನ್ನೂ ಆ ಪಾಂಡು ರಂಗನೇ ಸಂರಕ್ಷಿಸುವನು.

(ಲಲಿತೆಯು ನಿಧಾನಿಸುವಳು.)

ಅದಿರಲಿ, ನನ್ನನ್ನು ನಂಬದಿರಲು ಕಾರಣ?

ಲಲಿತ:—ಆ ಪಾಂಡುರಂಗದೇವನೇ ಬಲ್ಲ!

ಪಾಂ:—ಲಲಿತ! ನಿನ್ನ ಚಿಂತೆಯನ್ನು ಬಿಡು. ನಿನ್ನ ತಂದೆಯವರು ಜೀವಂತ ರಾಗಿರುವರೆಂಬುದೇ ನನ್ನ ಭಾವನೆ. ಅದು ಹೋಗಲಿ. ನಿನ್ನ ಕಷ್ಟ ಗಳೇನು? ಹೇಳು. ನಿನಗಾಗಿ ನಾನು ಯಾವುದಕ್ಕೂ ಹಿಂತೆಗೆಯುವು ದಿಲ್ಲ. ನಿನ್ನ ಕಷ್ಟಗಳನ್ನು ನಾನು ಪರಿಹರಿಸುತ್ತೇನೆ.

ಲಲಿತ:—ಈ ಮಾತು ಸತ್ಯವೆ?

ಪಾಂ:—ಲಲಿತ! ನಿನ್ನಾಣೆಗೂ ಸತ್ಯ! ನಿನ್ನ ಕಷ್ಟಗಳು ನನ್ನಿಂದ ಪರಿಹಾರ ವಾಗೋ ಪಕ್ಷದಲ್ಲಿ ಹೇಳು. ಸಂಕೋಚಪಡಬೇಡ. ನನ್ನ ಸರ್ವಸ್ವವೂ ನಿನಗೇ ಸೇರಿದ್ದಲ್ಲವೆ? ಲಲಿತ! ಹೇಳು.

ಲಲಿತ:—ಸಂತೋಷ! ನಾನು ಧನ್ಯಳಾದೆ. ಹಾಗಾದರೆ ನಾನು ನಂಬಿರುವ ಶ್ರೀ ಪಾಂಡುರಂಗ ದೇವನ ಸಾಕ್ಷಿಯಾಗಿಯೂ ತಮ್ಮ ಪ್ರಮಾಣವನ್ನು ನಡೆಯಿಸುವಿರಾ?

ಪಾಂ:—ನಿಸ್ಸಂದೇಹವಾಗಿ! ಲಲಿತ! ನಿನಗಾಗಿ ನಾನು ಏನನ್ನು ಬೇಕಾ ದರೂ ಮಾಡಬಲ್ಲೆ. ಶ್ರೀ ಪಾಂಡುರಂಗ ದೇವನ ಸಾಕ್ಷಿಯಾಗಿಯೂ ನಿನ್ನ ಕಷ್ಟಗಳೇನಿದ್ದರೂ ನಾನು ಪರಿಹಾರಮಾಡ್ತೇನೆ. ಇದು ಸತ್ಯ. ಹೇಳು. ಲಲಿತ!

ಲಲಿತ:—ಹಾಗಾದಲ್ಲಿ (ಎಂದು ಕೈಜೋಡಿಸಿ) ಸ್ವಾಮಿ! ನನ್ನನ್ನು ತಮ್ಮ ಮಗಳಂತೆ ಭಾವಿಸಿ ಆಶೀರ್ವದಿಸಿರಿ! ಇದಕ್ಕೆ ಶ್ರೀ ಪಾಂಡುರಂಗ ದೇವನೇ ಸಾಕ್ಷಿಯಾಗಿರಲಿ!

ಪಾಂ:—ಹಾಂ! ಲಲಿತ! ನಿನ್ನನ್ನು ನನಗೆ ಕೊಟ್ಟು ಮದುವೆಮಾಡುವುದಾಗಿ ನಿನ್ನ ತಂದೆಯು ಮಾತು ಕೊಟ್ಟಿರುವರಲ್ಲಾ?

ಲಲಿತ:—ಅದು ನಿಜ! ಅವರು ಮಾತನ್ನು ಬದಲಾಯಿಸುವ ಇಷ್ಟವಿಲ್ಲದೆಯೇ ಈಗ ಪ್ರಾಣವನ್ನು ತೊರೆದಿರಬೇಕು!

ಪಾಂ:—ಹಾಂ! ನಿಜವೆ? ಇರಲಾರದು - ಆದರೂ ಲಲಿತ! ನೀನು-ನನ್ನನ್ನು ವಿವಾಹ........ನೋಡು........

ಲಲಿತ:—ಸ್ವಾಮಿ! ಕ್ಷಮಿಸಿ. ಪಾಂಡುರಂಗದೇವನ ಸಾಕ್ಷಿಯಾಗಿ ತಾವು ಈಗೊಂದರಕ್ಷಣಕ್ಕೆ ಹಿಂದೆ ಮಾಡಿದ ಪ್ರಮಾಣವನ್ನು ನಡೆಯಿಸಲು ಇಷ್ಟವಿದ್ದಲ್ಲಿ ನಡೆಯಿಸಿ. ಹಾಗೆ ತಮಗೆ ಇಷ್ಟವಿಲ್ಲದಿದ್ದಲ್ಲಿ - ತಮಗುಂಟಾದ ತೊಂದರೆಯನ್ನು ಮನ್ನಿಸಿ. ನನ್ನ ತಂದೆಯವರನ್ನು ಕೊನೆಯ ಸಲ ಹುಡುಕುತ್ತೇನೆ. ಅವರನ್ನು ಕಂಡರೆ ಸರಿ. ಇಲ್ಲದಿದ್ದರೆ ನಾನೂ ಈ ಪಾಪಿ ಪ್ರಾಣವನ್ನು ತೊರೆಯುತ್ತೇನೆ. (ಎಂದು ಮತ್ತೆ ಹೊರಡಲು ಸಿದ್ಧಳಾಗುವಳು.)

ಪಾಂ:—(ಅವಳನ್ನು ತಡೆದು) ಲಲಿತ! ನಿಲ್ಲು. ನೀನು ಹೇಳುವುದಾದರೂ ಏನು? ಹಾಗಾದರೆ ನೀನು ನನ್ನನ್ನು ವಿವಾಹವಾಗಲು ಸಮ್ಮತಿಸುವುದಿಲ್ಲವೆ?

ಲಲಿತ:—ಸ್ವಾಮಿ! (ಎಂದು ಹೇಳಿ ಪಾಂಡುರಂಗನಿಗೆ ನಮಸ್ಕರಿಸಿ) ನಾನು ತಮ್ಮನ್ನು ಮತ್ತೊಮ್ಮೆ ಪ್ರಾರ್ಥಿಸುವೆನು. ಪಾಂಡುರಂಗದೇವನ ಆಣೆಯಾಗಿ ತಾವು ಮಾಡಿದ ಪ್ರಮಾಣವನ್ನು ನೆರವೇರಿಸಲು ಇಷ್ಟವುಳ್ಳವರಾದರೆ—ಇದೋ ತಮಗೆ ನಮಸ್ಕರಿಸುವ ನನ್ನಲ್ಲಿ ವ್ಯಾಮೋಹವನ್ನು ತೊರೆದು, ಇಂದಿನಿಂದ ನನ್ನನ್ನು ತಮ್ಮ ಮಗಳೆಂದು ಭಾವಿಸಿ-ಕೈಹಿಡಿದೆತ್ತಿ ಆಶೀರ್ವದಿಸಿರಿ. ಅಲ್ಲಿಗೆ ನನ್ನ ಕುಟುಂಬದವರ ಪ್ರಾಣಮಾನಗಳನ್ನು ರಕ್ಷಿಸಿದ ಮಹತ್ಪುಣ್ಯಕ್ಕೆ ತಾವು ಪಾತ್ರರಾಗುವಿರಿ, ತಂದೆಯು

ಆಜ್ಞೆಯನ್ನು ಅನುಸರಿಸಿ ಇಂದು ತಮ್ಮನ್ನು ನಾನು ಮದುವೆಯಾದರೆ ನನ್ನ ಮುಂದಿನ ಬಾಳೆಂತೆಸುವೆಂಬುದನ್ನು ತಾವೇ ಊಹಿಸಬಲ್ಲಿರಿ. ಹಿರಿಯರಾದ ತಮ್ಮಲ್ಲಿ ಈ ವಿಚಾರವನ್ನು ನಾನು ವಿಶೇಷವಾಗಿ ಹೇಳುವ ಪ್ರಕೃತವಿರುವುದಿಲ್ಲ.

ಇಂದು ನಮ್ಮ ನಾಡಿನಲ್ಲಿ ಏನೂ ಅರಿಯದ ಬಾಲಿಕೆಯರನೇಕರು, ಸ್ವತಂತ್ರಹೀನರಾಗಿ—ಪೋಷಕರ ಪ್ರೇರೇಪಣೆಯಿಂದ, ಅವರ ಬಲವಂತದಿಂದ—ತಮ್ಮ ಮನಸ್ಸಿಗೆ ಹಿಡಿಯದ—ತಮ್ಮ ತಾತಂದಿರಾಗಿರಲು ಸಾಕಾದಷ್ಟು ವಯಸ್ಸಾಗಿರುವ ವೃದ್ಧರನ್ನು ಮದುವೆಮಾಡಿಕೊಂಡು—ಅಲ್ಪಕಾಲದಲ್ಲಿಯೇ ಆ ವಿವಾಹಸೂತ್ರವು ನಶಿಸಿ—ಸೌಮಾಂಗಲ್ಯವು ಅಳಿದು—ಅಳವಿಲ್ಲದ ಶೋಕದಲ್ಲಿ ಮುಳುಗಿ—ತಾಯ್ತಂದೆಯರಿಗೆ ಹೊರೆಯಾಗಿ, ಒಡಹುಟ್ಟಿದವರ ಆದರವು ಅಳಿದು, ಬಂಧುಗಳಿಂದ ತಿರಸ್ಕೃತರಾಗಿ, ವೇಷಧಾರೀ ಸಮಾಜದ ಕ್ಷುಲ್ಲಕರ ವಾಗ್ವಿಷಫಲಗಳನ್ನುಂಡು ಪ್ರಾಣತ್ಯಾಗಮಾಡಿಕೊಳ್ಳುತ್ತಿರುವರಲ್ಲವೆ?

ನನ್ನ ವಿಜ್ಞಾಪನೆಯನ್ನು ಲಾಲಿಸುವಿರಾ? ಸ್ತ್ರೀಪುರುಷರಿಗೆ ಪರಸ್ಪರ ವ್ಯಾಮೋಹವು ಸಹಜವೆಂದು ನಾನು ಒಪ್ಪಿಕೊಳ್ಳುತ್ತೇನೆ. ಆದರೂ ವಯೋವ್ಯತ್ಯಾಸಗಳನ್ನು ಲಕ್ಷಿಸದ—ಇಂತಹ ಬಲವಂತ ವಿವಾಹಗಳು ಸ್ತ್ರೀಪುರುಷರಿಗೆ ಸಂತೋಷಕರವಲ್ಲ. ಇವುಗಳ ಮೂಲಕ ಜೀವಿತದ ಸುಖ, ಶಾಂತಿ, ಕ್ಷೇಮಸಮಾಧಾನಗಳನ್ನೂ ಕಾಣಲಾಗುವುದಿಲ್ಲ. ಇಂತಹ ಬಲವಂತ ವಿವಾಹಗಳು ಈ ವೇಳೆಗೆ ಎಷ್ಟೋ ನಡೆದು ಹೋಗಿ ಅವುಗಳ ಅನಿಷ್ಟ ಪರಿಣಾಮಗಳು ಸಮಾಜವನ್ನು ಸುಡುತ್ತಲಿವೆ. ತಮ್ಮನ್ನು ನಾನು ಹಾಗೂ ಮದುವೆಯಾಗಲೇ ಬೇಕೆಂದರೆ—ಅಲ್ಲಿಗೆ ನನ್ನ ಆತ್ಮಹತ್ಯೆಯು ನಿಜ. ಅದರ ಪರಿಣಾಮವಾಗಿ ಹೆತ್ತವರಿಗೆ ಮಗಳಿಲ್ಲ. ಕೈಹಿಡಿದವರಿಗೆ ಹೆಂಡತಿಯಿಲ್ಲ. ಈ ವಿವಾಹಕ್ಕೆ ಕಾರಣರಾದ ನಿಮ್ಮೆಲ್ಲರ ಹಸ್ತಗಳೂ ನನ್ನ ಆತ್ಮಹತ್ಯೆಯಿಂದ ಹೊರಚೆಲ್ಲುವ ರಕ್ತದಲ್ಲಿ ಕಲುಷಿತವಾಗುವುದು. ತಿಳಿದೂ ತಿಳಿದೂ ಇಂತಹ ಬಲವಂತ ವಿವಾಹಕ್ಕೆ ಅನುಮತಿಯನ್ನೀಯುವ ನೀವೊಬ್ಬೊಬ್ಬರೂ, ಕೇವಲ ನಿರಪರಾಧಿ, ನಿಷ್ಕಳಂಕ, ಸಹಾಯಶೂನ್ಯರಾದ ಕನ್ನಿಕೆಯರ ಕೊಲೆಗೆ ಕಾರಣರಾದಂತಾಗುವುದಲ್ಲವೆ? ಅದಕ್ಕೆ ಪ್ರತಿಯಾಗಿ ನನ್ನಂತಹ ಕರ್ಮಪೀಡಿತ

ಕನ್ನಿಕೆಯ ತಲೆಯನ್ನು ಒಂದು ಕೊಡಲಿಯಿಂದ ತುಂಡರಿಸುವುದು ಉಚಿತವಲ್ಲವೆ? ಇದರಲ್ಲಿ ಭ್ರಮೆಯೇನು? ಕೊಲೆಯು ಎಂದಿದ್ದರೂ ಕೊಲೆಯಲ್ಲವೆ? ಅದು ಪ್ರತ್ಯಕ್ಷವಾದರೇನು? ಪರೌಕ್ಷವಾದರೇನು? ಪ್ರತ್ಯಕ್ಷ ಕೊಲೆಯಲ್ಲಿ ಯಾದರೂ ಒಂದು ತೆರನಾದ ಧರ್ಮವುಂಟು. ನೀತಿಯುಂಟು. ಪ್ರತ್ಯಕ್ಷ ಕೊಲೆಗೆ ಪ್ರತಿಫಲವಾದ ಶಿಕ್ಷೆಯನ್ನು ಅನುಭವಿಸಲು ಧೈರ್ಯವಿಲ್ಲದವರೇ ಇಂತಹ ಅಧಮ ಕೊಲೆಯನ್ನು ಕುಟಿಲತೆಯಿಂದ ಪರೌಕ್ಷದಲ್ಲಿ ವಿರಚಿಸಿ— ತಲೆತಪ್ಪಿಸಿಕೊಳ್ಳಲು ಯತ್ನಿಸುವುದು!

ಪಾಂ:—ಲಲಿತ! ಹಾಗಾದಲ್ಲಿ ನೀನು ಹೇಳುವುದಾದರೂ ಏನು?

ಲಲಿತ:—ನನಗೆ ಸ್ವಾತಂತ್ರ್ಯ ಭಿಕ್ಷೆಯನ್ನು ನೀಡಿರೆಂದು! ಈ ಬಲವಂತ ವಿವಾಹದ ಅನರ್ಥಕಾರಕ ಬಲೆಯಿಂದ ನನ್ನನ್ನು ಬಿಡುಗಡೆ ಹೊಂದಿಸಿರೆಂದು! ನನ್ನ ಶ್ರೇಯಸ್ಸನ್ನು ಹೆಚ್ಚಿಸಿರೆಂದು! ನನ್ನ ಕುಟುಂಬದ ಪ್ರಾಣ ಮಾನ ಸಂರಕ್ಷಣೆಯಿಂದ ತಮಗೆ ಶಾಶ್ವತ ಕೀರ್ತಿಯು ದೊರೆಯಲೆಂದು! ನಾನು ಬೇಡುವ ಭಿಕ್ಷೆಯು ಶ್ರೀ ಪಾಂಡುರಂಗ ದೇವನ ದೃಷ್ಟಿಯಲ್ಲಿ ಸಾಧುವಾಗಿದ್ದಲ್ಲಿ - ಅದನ್ನು ತಾವು ನೀಡಬಹುದು. ನನ್ನ ಮುಂದಿನ ಹಿತವು, ಸೌಮಾಂಗಲ್ಯ ಭಾಗ್ಯವು -ತಮ್ಮ ಹಸ್ತದಲ್ಲಿರುವುದು. ಅದನ್ನು ನೀಡಿ. ನನ್ನ ಈ ಆರ್ತಧ್ವನಿಯು ತಮಗೆ ವಿದಿತವಾದರೆ—ನನ್ನ ಪ್ರಾರ್ಥನೆಯು ತಮಗೆ ಅಂಗೀಕೃತವಾಗಿದ್ದಲ್ಲಿ, ಈದೀನ ಕುವರಿಯನ್ನು ತಮ್ಮ ಮಗಳೆಂದು ಭಾವಿಸಿ, ಕೈಹಿಡಿದೆತ್ತಿ ಆಶೀರ್ವದಿಸಿರಿ. ಸಮಾಜ ವಿಷಕೂಪದಿಂದ ನನ್ನನ್ನು ಉದ್ಧರಿಸಿರಿ. ನನ್ನ ಭಾಗಕ್ಕೆ ಸಾಕ್ಷಾತ್ ಪಾಂಡುರಂಗದೇವರು ತಾವೇ! (ಎಂದು ನಮಸ್ಕರಿಸುವಳು) ಜಾಗ್ರತೆ ಮಾಡಿ. ಕಾಪಾಡಿ. ನನ್ನ ಸಲುವಾಗಿ ಸಂಕಟಕ್ಕೊಳಗಾದ ನನ್ನ ತಂದೆಯನ್ನು ತಕ್ಷಣ ಕಾಣದಿದ್ದಲ್ಲಿ ನನ್ನ ಪ್ರಾಣವು ಹಾರಿಹೋಗುವುದು. ವಾಗ್ದಾನವನ್ನಿತ್ತು ಸಲಹಿರಿ. ನನ್ನನ್ನು ಆಶೀರ್ವದಿಸಿ ಕಳುಹಿಸಿರಿ.

**ಪಾಂ:—(ಲಲಿತೆಯನ್ನು ನೋಡಿ) ಲಲಿತ! ಏಳಮ್ಮಾ! ನೀನು ಸುಖಿಯಾಗು. (ಎಂದು ಆಶೀರ್ವದಿಸಿ ಕೈಹಿಡಿದೆಬ್ಬಿಸಿ) ನಿನ್ನ ಅಮೋಘ**

ವಾದ ದೈವಭಕ್ತಿಗೆ ಮೆಚ್ಚಿದೆ. ಅಮ್ಮಾ! ಮಗು! ಲಲಿತ! ನನ್ನ ಚಿತ್ತಕ್ಕೆ ಮುಸುಕಿದ್ದ ಭ್ರಮೆಯು ಇಂದು ನಿನ್ನಿಂದ ಹಾರಿಹೋಯಿತು. ಅಪೂರ್ವ ನಾರೀ ರತ್ನಳೇ! ಸ್ತುತ್ಯಾರ್ಹವಾದ ನಿನ್ನೀ ದಿವ್ಯ ಬೋಧೆಯು ನನ್ನಂತಹ ಕಾಮಪೀಡಿತ, ಚಪಲಚಿತ್ತ, ಧನಮದಾಂಧ ಮುದಿಗೂಬೆಗಳನ್ನು ಸಕಾಲದಲ್ಲಿ ಎಚ್ಚರಿಸಿ-ಸಮಾಜಕ್ಕೆ ತಟ್ಟಿರುವ ಕ್ಷೋಭೆಯನ್ನು ಪರಿಹರಿಸಲಿ. ಬಲವಂತ ವಿವಾಹವೆಂಬ ವಿಷವೃಕ್ಷವು ಬೇರುಸಹಿತ ಮುರಿದು ಬೀಳಲಿ! ಜ್ಞಾನಮಾರ್ಗವನ್ನು ಸಾಧಿಸುವ ಈ ವೃದ್ಧಾಪ್ಯದಲ್ಲಿ ವಿವಾಹದ ಮುಖಾಂತರ ಮತ್ತೆ ಭವಸಾಗರದಲ್ಲಿ ಬಿದ್ದು ಹೊರಳಾಡಿ—ನರಕವೊಂದನ್ನು ನಿರ್ಮಿಸಿ—ನರಜನ್ಮವನ್ನು ನಾಶಮಾಡಿಕೊಳ್ಳಲೆತ್ನಿಸಿದ—ನನ್ನ ಅಧಮ ಅವಿವೇಕವನ್ನೇನೆಂದು ಹೇಳಲಿ? ಲಲಿತ! ನನ್ನ ಕಾಮಾಂಧತೆಯಿಂದ ನಿನಗುಂಟಾದ ಮನೋಯಾತನೆಯನ್ನು ಮರೆತು ನನ್ನನ್ನು ಕ್ಷಮಿಸು. ನಾನು ಈಕ್ಷಣದಿಂದ ನಿನ್ನನ್ನು ಮಗಳೆಂದು ಭಾವಿಸುವೆನು. ನಿನ್ನ ಶೋಕವನ್ನು ತೊರೆ. ನಿನಗಾಗಿ ನಿನ್ನ ತಂದೆಯ ಸಾಲವನ್ನೂ ಮನ್ನಿಸಿದ್ದೇನೆ.

ಲಲಿತ:— ಪೂಜ್ಯರೆ! (ಎಂದು ಮತ್ತೆ ವಂದಿಸುವಳು) ನಾನು ಧನ್ಯಳಾದೆ. ತಮ್ಮನ್ನು ನಾನು ಮನ್ನಿಸುವುದೆಂದರೇನು? ತಾವು ನನ್ನ ತಂದೆಯ ಸಮಾನ. ಇನ್ನು ಅನುಜ್ಞೆಯಾದರೆ ನನ್ನ ತಂದೆಯನ್ನು ಹುಡುಕಲು ಹೋಗುವೆನು.

ಪಾಂ:—ಶ್ರೀ ಪಾಂಡರಂಗನು ನಿನಗೆ ನೆರವಾಗಲಮ್ಮಾ!



**ದೃಶ್ಯ ೧೪]** **[ಸ್ಥಾನ : ಬೀದಿ**

(ಪಾತ್ರಗಳು : ಮುಕುಂದ್ ಮತ್ತು ಪ್ರಭಾಕರ್)

ಮು:—(ಸ್ವಗತ) ಲಲಿತೆಯ ರೋಗ! ಪಾಂಡುರಂಗನ ಚಿಂತೆ! ಇತರ ಸಾಲಗಳ ಹೊರೆತ! ಶ್ಯಾಮಲೆಯ ಖಾಯಿಲೆ! ಬ್ಯಾಂಕಿನವರ ಡಿಕ್ರಿ! ಬೆಳಗಾದರೆ ಜಪ್ತಿ! ಅಯ್ಯೋ ಮುಕುಂದ! ಒಂದು ಕ್ಷಣ ನೆಮ್ಮದಿಯಾಗಿ ಮನೆಯಲ್ಲಿ ನಿಂತು, ಸಂಸಾರದ ಸಂಕಟಗಳನ್ನು ಗಮನಿಸುವಂತಿಲ್ಲ. ನಿನ್ನೆಯ ದಿವಸ ನಾನು ಮನೆಯನ್ನು ಬಿಟ್ಟುದು. ಮನೆಯಲ್ಲಿ ಎಲ್ಲರೂ ಉಪವಾಸ! ಸಾಲಗಾರರ ಕಾಟದಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಹೀಗೆ ಹೊರಗಿನಿಂದ ಹೊರಗೆ ತಿರುಗುವುದು! ಇದೆಂತಹ ಅನಿಷ್ಟ ಬಾಳು? ಕೈಯ್ಯಲ್ಲೊಂದು ಬಿಡಿಕಾಸಿಲ್ಲ. ಈ ಮಧ್ಯೆ ಡಾಕ್ಟರವರು ಕಳೆದ ಒಂದು ವಾರದಿಂದಲೂ ಮನೆಯ ಕಡೆ ಬರಲಿಲ್ಲ. ಹೇಗೆ ತಾನೇ ಈ ದುರ್ಭರ ಜೀವನವನ್ನು ಸೈರಿಸಲಿ? ಆತ್ಮಹತ್ಯೆಯ ಪ್ರಯತ್ನವೂ ವಿಫಲವಾಯಿತು. ಅಂದು ಆ ಸಾಧುವರ್ಯರು ಹೇಳಿದುದೆಲ್ಲವೂ ಅಕ್ಷರಶಃ ನಿಜ. ಆದರೇನು ಮಾಡುವುದು? ಈ ತೆರನಾದ ಇಕ್ಕಟ್ಟಿನ ಸಮಯದಲ್ಲಿ ಇತರರ ಕಾಲನ್ನು ಕಟ್ಟಿಕಟ್ಟಿ ನಾನು ಎಲ್ಲ ಭಾಗದಲ್ಲಿಯೂ ಕೆಟ್ಟೆ. ಹಾಗೂ ನನ್ನಂತಹ ನಿತ್ಯ ದರಿದ್ರನಿಗೆ ಯಾರು ತಾನೇ ಕಾಲಾಂತರಕ್ಕೂ ಸಹಾಯ ಮಾಡಲಾದೀತು?

(ಪ್ರವೇಶ : ಪ್ರಭಾಕರ್)

ಪ್ರ:—ಮುಕುಂದ್! ಇದೇನು? ನಡುಬೀದಿಯಲ್ಲಿ ನಿಂತು, ಹೀಗೆ ಹುಚ್ಚನಂತೆ ಯೋಚಿಸುತ್ತಿರುವಿಯೇಕೆ? ನಿನ್ನ ಸ್ವಾವ ಭ್ರಮಣವು ಮತ್ತೆ ಹಿಡಿಯಿತು? ಬಿಡು ಚಿಂತೆಯನ್ನು!

ಮು:—ಅಹುದು. ನಾನೊಬ್ಬ ಹುಚ್ಚ! ನಿಜ. ಆಸ್ತಿ ಅಂತಸ್ತುಗಳು ಅಳಿದು ಹೋಗಿ, ಸಾಲಗಾರನ ಮಗನಾಗಿ – ದಿಕ್ಕು ತೋರದವನಂತೆ ಅಲೆದಲೆದು - ಕಂಡಕಂಡೆಡೆಯಲ್ಲಿ ಮಾನವಳಿಯಲು–ನಂಬಿದ ಸತಿಸುತೆಯರೆಲ್ಲರೂ - ಪ್ರತಿಕ್ಷಣದಲ್ಲಿಯೂ ಸಾವನ್ನೇ ಇದಿರು ನೋಡುತ್ತಿರಲು –

ದಿಕ್ಕುತೋಚದ - ಮುಕುಂದನಿಗೆ ಹುಚ್ಚು ಹಿಡಿಯುವುದು ಆತಿಶಯವೇ ?

ಪ್ರ:—ಮುಕುಂದಾ ! ಸ್ಥೈರಿಸು. ಜೀವಿತದಲ್ಲಿ ಇನ್ನೂ ಚೈತನ್ಯವುಂಟು. ಧೈರ್ಯಗುಂದಬೇಡ.

ಮು:—ಜೀವ ! ಚೈತನ್ಯ ! ಧೈರ್ಯ ! ಸುಟ್ಟುಹೋದ ಈ ಬಾಳಿಗೆ ಅವು ಬೇರೆ ಕೇಡು.

ಪ್ರ:—ಇದೇನು ಮುಕುಂದ್ ! ನೀನಿಂತಹ ಹೇಡಿಯಾಗಬಹುದೇ ?

ಮು:—ಹೇಡಿ ! ಅಹುದು. ಕೈಹಿಡಿದ ಹೆಂಡತಿಯನ್ನು ಸಲಹಲಾರದವನು ಹೇಡಿಯಲ್ಲವೆ ಮತ್ತೇನು ? ಮಕ್ಕಳ ಮನಸ್ಸಿಗೆ ತಟ್ಟಿದ ಯಾತನೆಯನ್ನೂ, ದೇಹಕ್ಕೆ ಅಂಕುರಿಸಿದ ವ್ಯಾಧಿಯನ್ನೂ— ಪರಿಹರಿಸಲು ಶಕ್ತಿಯಿಲ್ಲದ - ಉಪವಾಸದಿಂದ ಅಡಿಗಡಿಗೆ ತೊಳಲಿ ಕಳಪೆ ಹೊಂದಿದವರನ್ನು ನೋಡಿ ನೋಡಿ ನಿರ್ವೀರ್ಯನಾಗಿ ಕುಳಿತಿರುವ ನನ್ನಂತಹ ಪಾಪಿಯ ಪ್ರಾಣವು ಒಮ್ಮಿಂದೊಮ್ಮೆ ಹಾಗೆಯೇ ಹಾರಿಹೋಗದೇತಕ್ಕೆ ?

ಪ್ರ:—ಮುಕುಂದ್ ! ಈ ಪ್ರಾಣತ್ಯಾಗದ ಒಳಸಂಚು ! ಇದು ಅವಿವೇಕ ! ಆತ್ಮವಂಚಕ ! ನಂಬಕದ್ರೋಹವೆಂದು ತಿಳಿ. ಅಯ್ಯೋ ಮೂಢ ! ಪ್ರಾಣತ್ಯಾಗವನ್ನು ಮಾಡಿಕೊಂಡಾಕ್ಷಣಕ್ಕೆ ಎಲ್ಲ ಕಷ್ಟಗಳೂ ಹಾರಿಹೋಗುವುದೆಂಬ ನಿನ್ನ ತಿಳಿಗೇಡಿತನಕ್ಕೇನೆಂದು ಹೇಳಲಿ ? ನಂಬಿದವರನ್ನು ಕಾಡುಪಾಲು ಮಾಡಿ - ಅವರನ್ನು ಘೋರಸಂಕಟಗಳಿಗೆ ಗುರಿಮಾಡಿ - ಸ್ವಾರ್ಥಾಭಿಲಾಷೆಯಿಂದ ನೀನು ಮಟ್ಟಿಗೆ ಪ್ರಾಣವನ್ನು ತೊರೆಯುವುದು. ಅಹಹ ! ಎಷ್ಟು ಲಕ್ಷಣವಾಗಿದೆ ನಿನ್ನ ವ್ಯವಹಾರ ? ಹೂಂ ! ಬರಿಯ ಭ್ರಮೆ !

ಮು:—ಭ್ರಮೆಯೇತಕ್ಕೆ ? ಅಂದು ಒಬ್ಬ ಸಾಧುಗಳು ಆಕಸ್ಮಿಕವಾಗಿ ನನ್ನನ್ನು ಸಂಧಿಸಿ ಈಗ ನೀನಾಡುವ ಶೈಲಿಯಲ್ಲಿಯೇ ಹಲವು ಹಿತಬೋಧನೆಗಳನ್ನು ಮಾಡಿದರು. ಅವರ ಜ್ಞಾನವು ಅಸದೃಶವಾದುದೆಂದು ನಾನು ಬಲ್ಲೆ. ಅವರ ಬೋಧೆಯು ಆತ್ಮೋದ್ಧಾರಕವಾ

ದುದು. ಆದರೆ ಪ್ರಭಾಕರಾ! ನನ್ನ ಯಾವದ್ವಿಶಿಷ್ಟ ಕಷ್ಟಗಳೂ ಹಣ ವೊಂದರಿಂದಲೇ ಪರಿಹಾರ ಹೊಂದತಕ್ಕದ್ದು. ಆ ಹಣವಿಲ್ಲದುದ ರಿಂದಲೇ ನಾನಿಷ್ಟು ಕಷ್ಟಪರಂಪರೆಗಳಲ್ಲಿ ಬಿದ್ದು ದಿಕ್ಕುತೋರದೆ ಹೊರಳಾಡುತ್ತಿರುವುದು. ಆದರೆ ಸಾಧುಗಳನ್ನು ಸಂಧಿಸಿದ ತರು ವಾಯ ಅವರ ಉಪದೇಶವನ್ನು ಪರಿಗ್ರಹಿಸಿ ಇಷ್ಟು ಕಾಲವೂ ದೈವ ವನ್ನು ನಂಬಿ ಕಾಲವನ್ನು ತಳ್ಳಿದೆ. ಆದರೇನು? ದಿನೇ ದಿನೇ ನನ್ನ ಕಷ್ಟಗಳು ಪ್ರಬಲವಾಗುತ್ತಿವೆಯೋ ಹೊರತು ಅವು ಅಳಿಯುವಂತೆ ಕಾಣಲಿಲ್ಲ. ಇನ್ನಾವ ಸುಯೋಗವನ್ನು ನಾನು ಇದಿರುನೋಡಬೇಕಾ ಗಿರುವುದೋ ತಿಳಿಯದಾಗಿದೆ.

ಪ್ರ:—ಮುಕುಂದ್! ಆದರೂ ತಾಳ್ಮೆಯನ್ನು ತೊರೆಯಬೇಡ. ಪರಮಾತ್ಮನ ಸಂಕಲ್ಪವೊಂದಿರುವುದು. ಅದನ್ನು ಮರೆಯಬೇಡ. ಆತನ ಕರುಣಾ ಕಟಾಕ್ಷವೊದಗಿ ನೀನು ಸುಖಿಯಾಗುವೆಯೆಂಬುದೇ ನನ್ನ ದೃಢನಂಬಿಕೆ.

ಮು:—ಪ್ರಭಾಕರ್! ಇನ್ನೇಕೆ? ಇದಾವ ಮಹತ್ತರವಾದ ಸಾಧನೆ ಯೆಂದರಿತು ಈ ಅವಮಾನಕರವಾದ- ಅನುಪಯೋಗ ಜೀವಿತವನ್ನು ಮುಂದುವರಿಸಬೇಕು? ಇಂದು ನನ್ನ ಮನಸ್ಸಿನ ಸಹಸ್ರ ಯಾತನೆ ಗಳು ಎಲ್ಲಿಯಿಲ್ಲದಂತಾದುವು. ನೀನಷ್ಟೇ ಸಮಾಧಾನವನ್ನು ಹೇಳು. ಇನ್ನರಕ್ಷಣವೂ ನನ್ನಿಂದ ಸಹಿಸಲಾಗದು.

ಪ್ರ:—ಇದೇನು ಮುಕುಂದ್! ಇದೆಂತಹ ವಿಪರೀತ ವಿಕಲ್ಪ?

ಮು:—ಅಹುದು ಮಿತ್ರ! ಇದಕ್ಕೆ ಬದಲು ನನಗನ್ನಿಸುತ್ತದೆ – ಹೆಂಡತಿ ಮಕ್ಕಳನ್ನು ವಧೆಮಾಡಿ ನಾನೂ ಪ್ರಾಣವನ್ನು ತೊರೆದೆನಾದರೆ - ಈ ಸಂಸಾರದ ಸಂಕಟವೂ - ಸಾಲಗಾರರ ಕಾಟವೂ - ಸಾವಿನಲ್ಲಿ ಕಲೆತು ಹೋಗಿ - ಆಗಲಾದರೂ ತಪಿಸುತ್ತಿರುವ ಈ ಆತ್ಮಕ್ಕೆ ಯತ್ಕಿಂಚಿತ್ ಶಾಂತಿ ದೊರಕಬಹುದೇನೋ ಎಂದು. ಪ್ರಭಾಕರ್! ಏನು? ಹೀಗೆ ನೋಡುವೆ? ಮುಕುಂದನು ಆಡಿದ ಮಾತಿಗೆ ತಪ್ಪುವನಲ್ಲ. ಮಾನವ ಕೋಟಿಯು ಮುಕುಂದನನ್ನು 'ನಡೆ ನಡೆ' ಎಂದು ಅಟ್ಟುತ್ತಿರುವುದು. ಅದರಲ್ಲಿ ನೀನೊಬ್ಬನು 'ಇರು ಇರು' ಎನ್ನುವೆ. ಪ್ರಭಾಕರ್! ಇಂದು

ಮುಕುಂದನ ಸಂಕಲ್ಪವು ದೊಡ್ಡದೋ - ಮಹಾಮಹಿಮನ ಸಂಕಲ್ಪವು ದೊಡ್ಡದೋ ? ಅದನ್ನೂ ನೋಡಿಬಿಡುತ್ತೇನೆ. ಮಿತ್ರಾ ! ನಿನ್ನಲ್ಲಿ ಧೂರ್ತತನವನ್ನು ತೋರ್ಪಡಿಸುತ್ತಿರುವೆನೆಂದು ಚಿಂತಿಸಬೇಡ. ನನ್ನನ್ನು ಕ್ಷಮಿಸು. ಮಾಯಾಪ್ರಪಂಚದಲ್ಲಿ ಮುಕುಂದನ ಪ್ರವಾಸವು ಸಾಕೆನಿಸಿದೆ.

ಪ್ರ:—ಮುಕುಂದ ! ಈ ಮೌಢ್ಯವನ್ನು ಬಿಡು. ಕಷ್ಟಕಾಲದಲ್ಲಿ ಅನೇಕ ತೆರನಾದ ಪಾಪಮಯ ಯೋಚನೆಗಳು ಮನುಷ್ಯನ ಮನಸ್ಸಿನಲ್ಲಿ ಮೊಳೆತು – ಅವನ ನಿರ್ಮಲಜ್ಞಾನಕ್ಕೆ ಕತ್ತಲೆಯು ಕವಿಯುವುದು. ಇದರಿಂದ ಮಾನಸಿಕ ಸ್ಥೈರ್ಯವು ಕೆಡುವುದು. ಯೋಚಿಸಬೇಡ. ದೈವವನ್ನು ನಂಬು. ನಿನ್ನ ಕಷ್ಟಗಳನ್ನು ಆತನಿಗೊಪ್ಪಿಸು. ಚಿಂತೆಯನ್ನು ತೊರೆ. ಈಗ ಮನೆಗೆ ಹೋಗು. ವ್ಯಾಧಿಪೀಡಿತ ಶ್ಯಾಮಲೆಯನ್ನು ಪಚರಿಸು. ಉಳಿದವರನ್ನು ಸಂತೈಸು. ನನ್ನ ಮಾತನ್ನು ನಿರಾಕರಿಸಬೇಡ. ಹೂಂ ! ನಡೆಯಪ್ಪಾ ! ನಾನು ಡಾಕ್ಟರನ್ನು ಕರೆತರುತ್ತೇನೆ.



ದೃಶ್ಯ ೧೫] [ಸ್ಥಾನ: ಮುಕುಂದನ ಮನೆ

(ಪಾತ್ರಗಳು : ಸೀತಾ, ಶ್ಯಾಮಲಾ, ಆನಂದ್)

(ಶ್ಯಾಮಲೆಯು ಕಾಯಿಲೆಯಿಂದ ಮಲಗಿರುವಳು. ಸೀತೆಯು ಅವಳ ಬಳಿ ಕುಳಿತು)

ಸೀ:—(ಸ್ವಗತ) ಅಯ್ಯೋ! ನಿನ್ನೆ ಬೆಳಿಗ್ಗೆ ಹೋದವ್ರು ಅವರಿನ್ನೂ ಮನೆಗೆ ಬರಲಿಲ್ಲ. ಅವರನ್ನು ಹುಡುಕಿಕೊಂಡು ಹೋದ ಲಲಿತೆಯ ಸಮಾಚಾರವೂ ತಿಳಿಯದಾಯಿತು. ಇನ್ನು ಒಂಟಿಯಾಗಿ ಹೋಗಿರುವ ಹುಡುಗಿಗೆ ಯಾವ ಆಪತ್ತು ಸಂಭವಿಸುವುದೋ ಏನೋ? ಶ್ಯಾಮಲೆಗೆ ಔಷಧಿಯನ್ನು ತರಲುಹೋದ ಆನಂದುವೂ ಇನ್ನೂ ಬರಲಿಲ್ಲ. ಇವಳಿಗೆ ಗಂಜಿ ಕಾಸಿ ಕೊಡೋಣವೆಂದ್ರೆ – ಹಾಲಿಲ್ಲ, ಸಕ್ಕರೆಯಿಲ್ಲ – ರವೆಯಿಲ್ಲ. ಬೆಳಗಿನಿಂದ ಎಲ್ಲರೂ ಉಪವಾಸ! ಅವರ ಪಾಡಂತೂ ಹೇಳಲೇ ಕೆಲಸವಿಲ್ಲ. ಕೋರ್ಟು ಕಛೇರಿಗಳಿಗೆ ಅಲೆದಲೆದು ಬೇಸತ್ತು ಹೋದರು. ಅವರ ಶರೀರವೂ ಕೃಶವಾಗಿ ಹೋಯಿತು. ಆತ್ಮಹತ್ಯೆ ಮಾಡಿಕೋತೀನೀಂತ ಬೇರೆ ಆಗಿಂದಾಗ್ಗೆ ಹೇಳತಾನೇ ಇದ್ದಾರೆ. ನನ್ನ ಸಂಕಟವನ್ನು ಯಾರಲ್ಲಿ ಹೇಳಿಕೊಳ್ಳೋದಕ್ಕೂ ಹತ್ತಿರ ಒಬ್ಬರಿಲ್ಲ. ಅವರನ್ನು ಹೇಗೆ ತಾನೇ ಸಮಾಧಾನಪಡಿಸಲಿ? ಈ ಮಕ್ಕಳ ಶೋಕ ನೋಡಿ ಹೇಗೆ ಸಹಿಸಲಿ? ಅವರನ್ನು ಯಾವ ರೀತೀಲಿ ಸುಧಾರಿಸುವುದೋ ಗೊತ್ತಿಲ್ಲವಲ್ಲಾ. ಅಯ್ಯೋ, ಭಗವಂತ! ನೀನೇ ಹರಿಸಪ್ಪಾ ಈ ಕಷ್ಟಗಳನ್ನ. ನನಗಂತೂ ದಿಗ್ಭ್ರಮೆ ಹಿಡಿದುಹೋಗಿದೆ. ಕೈಕಾಲು ನಡುಕ ಬೇರೆ ಆರಂಭಿಸಿಬಿಟ್ಟಿದೆ. ದೇವರೇ ಕಾಪಾಡಬೇಕು.

[ ಕೈಯಲ್ಲಿ ಔಷಧಿ ಸೀಸೆಯನ್ನು ಹಿಡಿದು ಪ್ರವೇಶ ಆನಂದ್ ]

ಆ:—ಅಮ್ಮಾ! ಡಾಕ್ಟರು ಈ ಔಷಧಿ ಕೊಟ್ಟಿದ್ದಾರೆ. ಶ್ಯಾಮಲಕ್ಕನಿಗೆ ಕುಡಿಸೂಂತ ಹೇಳಿದ್ದಾರೆ. ಹಾಗೇ ಸ್ವಲ್ಪ ಹೊತ್ತಾದ ಮೇಲೆ ಗಂಜೀ ಕೊಡೂಂತ ಹೇಳಿದರಮ್ಮಾ! ಅವರು ಪುರುಸೊತ್ತು ಮಾಡಿಕೊಂಡು ರಾತ್ರಿ ಬರ್ತೇನೇಂತ ಹೇಳಿದ್ದಾರೆ. ಅಮ್ಮಾ! ಹಸಿವಮ್ಮಾ!

ಸೀ:—ಮನೇಲ್ಲೇನೂ ಇಲ್ಲವಲ್ಲೋ ಕಂದ!

ಆ:—ಬಹಳ ಹಸಿವಮ್ಮಾ! ತಡಿಯೋಕಾಗೋಲ್ಲ.

ಸೀ:—(ಸ್ವಗತ) ಹೂಂ! ಇದೆಲ್ಲಾ ಹೆತ್ತವರ ಪುಣ್ಯ! ಪದಾರ್ಥಗಳು ಚೆಲ್ಲಿ ಹೋದಾಗ ಕಣ್ಣಿನಲ್ಲಿ ಕಾಣಲಿಲ್ಲ. ಅದೊಂದು ಕನಸಿನ ಕಾಲವಾಗಿ ಹೋಯಿತು. ಈ ಕಾಲವ್ರೋ— ಚೆಲ್ಲಿಹೋದುದನ್ನು ಆರಿಸಿ ತಿನ್ನುವ ಕಾಲ! ವಿಧಿಯ ಕಟ್ಟಳೆ! (ಪ್ರಕಾಶ) ಅಪ್ಪಾ ಆನಂದು! ಅಪ್ಪಾವ್ರು ನಿನ್ನೆಯಿಂದ ಊಟಮಾಡಿಲ್ಲ. ಅವರಿಗೋಂತ ಎರಡು ರೊಟ್ಟಿ ಇಟ್ಟಿದ್ದೇನೆ. ತಕ್ಕೋ ಹೋಗಪ್ಪ.

ಆ:—ನನಗೆ ರೊಟ್ಟಿ ಬೇಡಾಮ್ಮಾ! ಹೊಟ್ಟೆತುಂಬೋಲ್ಲ. ಅನ್ನ ಹಾಕಮ್ಮಾ!

ಸೀ:—(ಸ್ವಗತ) ಅಯ್ಯೋ ಗ್ರಹಚಾರವೇ! (ಪ್ರಕಾಶ) ಲೋ ಆನಂದು! ಇವತ್ತು ಅಡಿಗೆ ಮಾಡಲಿಲ್ಲವಪ್ಪಾ! ನಾಳೆ ಅನ್ನಮಾಡಿ ಬಡಿಸ್ತೇನೆ. ಈಗ ರೊಟ್ಟಿ ತಿಂದೇ ಮಲಕ್ಕೋಪ್ಪಾ. ನನಗೂ ಸಂಕಟವಾಗಿದೆ; ತಡೆಯೋಕಾಗೋಲ್ಲ. (ಆನಂದನು ರೊಟ್ಟಿಯನ್ನು ತಿಂದು ಮಲಗುವನು). (ಸ್ವ) ಅಯ್ಯೋ, ಲಲಿತೆಯೂ ಬರಲಿಲ್ಲ. ಅವರೂ ಬರಲಿಲ್ಲ. ಶ್ಯಾಮಲೆಗೆ ಪ್ರಜ್ಞೆ ತಪ್ಪಿದೆ. ಇನ್ನೇನು ಮಾಡಲೋಪ್ಪ ದೇವರೇ! (ಎಂದು ಆಯಾಸದ ಭರದಿಂದ ಮಲಗುವಳು.)



ದೃಶ್ಯ ೧೬] [ಸ್ಥಾನ : ಬೀದಿ.

(ಪ್ರವೇಶ: ಪಾಂಡರಂಗ)

ಪಾಂ:—(ಸ್ವಗತ) ಇದೇನು ವಿಚಿತ್ರ ! ಲಲಿತೆಯು ಹೇಳಿದ್ದು ಸುಳ್ಳಲ್ಲ. ಮುಕುಂದನು ಆತ್ಮಹತ್ಯೆಮಾಡಿಕೊಂಡಿರಬೇಕೆಂದೇ ತೋರುವುದು. ಇಲ್ಲದಿದ್ದರೆ ಇಷ್ಟುಹುಡುಕಿಯೂ ಆತನು ಕಾಣದಿರುವುದಕ್ಕೆ ಕಾರಣ ? ಅಯ್ಯೋ ! ಒಬ್ಬ ನಿರ್ದೋಷಿಯ ಕೊಲೆಗೆ ನಾನೇ ಕಾರಣನಾದಂತೆ ಕಾಣ್ತಾ ಇದೆಯಲ್ಲಾ! ಇನ್ನೇನು ಮಾಡಲಿ ? ಲಲಿತ! ಲಲಿತ! ನನ್ನನ್ನು ಕ್ಷಮಿಸು. ನಿನ್ನಲ್ಲಿ ನಾನು ವ್ಯಾಮೋಹಗೊಳ್ಳದಿದ್ದರೆ - ಈ ಅನರ್ಥವು ಸಂಘಟಿಸುತ್ತಿರಲಿಲ್ಲ. ಹಾಂ ! ಏನುಮಾಡಲಿ ? ಸೀತಮ್ಮನ ಮಾಂಗಲ್ಯ ಬಲವು ಹೇಗಿರಬಹುದೋ ಕಾಣೆನಲ್ಲಾ ! ಹಾಗೂ ಮುಕುಂದನು ಆತ್ಮಹತ್ಯೆಮಾಡಿಕೊಂಡಿರುವುದೇ ನಿಜವಾದರೆ ನಾಳೆ ನಾನು ಹೇಗೆ ನಾಲ್ಕು ಜನರಿಗೆ ಮುಖವನ್ನು ತೋರಿಸಲಿ ? ಪರಮಾತ್ಮ ! ನೀನೇ ಕಾಪಾಡಪ್ಪ ನನ್ನನ್ನೀ ಪಾತಕದಿಂದ ! ಇನ್ನೇನು ಪ್ರಾರ್ಥಿಸಲಿ ನಾನು ? ಹಾಂ ! ಈ ನಾರಾಯಣ ಯಾಕಿನ್ನಾ ಬರಲಿಲ್ಲ?

(ಪ್ರವೇಶ: ನಾರಾಯಣ)

ನಾ:—ಬುದ್ಧಿ ! ಬುದ್ಧಿ! ಬುದ್ಧಿ! ಮುಕುಂದಪ್ನೋರು ಇತ್ಕಡೇನೇ ಎಲ್ಲೋ ಬಂದ್ರಂತೆ ಬುದ್ಧಿ ! ತಮ್ಮ ಕಣ್ಣಾಗೂ ಬೀಳ್‌ನಿಲ್ಲವ್ರಾ ?

ಪಾಂ:—ಇಲ್ಲವಲ್ಲೋ, ಹೋಗಲಿ ಮನುಷ್ಯ ಬದುಕಿದ್ದಾನಲ್ಲ ! ನಡಿ.

(ಇಬ್ಬರೂ ಹೊರಡುವರು)

(ಪ್ರವೇಶ: ಖಿನ್ನಮುಖಳಾಗಿ—ಲಲಿತ)

ಲಲಿತ:—(ಸ್ವಗತ) ಹೂಂ ! ನನ್ನ ದುಃಖವು ಮಿತಿಮೀರಿತು. ಪಾಂಡುರಂಗರಾಯರ ಬಲೆಯಿಂದ ಬಿಡುಗಡೆಯಾದೆ. ಇನ್ನು ನನ್ನ ತಂದೆಯವರನ್ನು ಹುಡುಕಬೇಕು. ಆಗಲಿ, ದೈವವನ್ನು ನಂಬಿ ಮುಂದಿನ ಪ್ರಯತ್ನವನ್ನು ಮಾಡುವೆನು. (ಹೊರಡುವಳು)



ದೃಶ್ಯ : ೧೭]  [ಸ್ಥಾನ : ಮುಕುಂದನ ಮನೆ

[ಪಾತ್ರಗಳು :—ಮುಕುಂದ್, ಸೀತಾ, ಲಲಿತಾ, ಶಾಮಲಾ, ಆನಂದ್, ಪ್ರಭಾಕರ್, ಪಾಂಡುರಂಗ್, ಜಗಜೀವನ್‌ದಾಸ್, ಡಾ|| ಮನೋಹರ್, ನಾರಾಯಣ]

(ಕಾಯಿಲೆಯಿಂದ ಪ್ರಜ್ಞೆ ತಪ್ಪಿ ಬಿದ್ದಿರುವ ಶ್ಯಾಮಲ. ಉಪವಾಸದಿಂದ ಆಯಾಸವನ್ನು ತಡೆಯಲಾರದೆ ಮೈಮರೆತು ಬಿದ್ದಿರುವ ಸೀತಾ ಮತ್ತು ಆನಂದ್)

[ಪ್ರವೇಶ : ಖಿನ್ನ ಮುಖನಾಗಿ: ಮುಕುಂದ್]

ಮು:—(ಸ್ವಗತ) ಹಾ ! ಇದೇನು ? ಎಲ್ಲವೂ ನಿಶ್ಯಬ್ದ ?

(ಮೈಮರೆತು ಮಲಗಿರುವವರನ್ನು ನೋಡಿ ಗಾಬರಿಯಿಂದ)

ಈ ನಿದ್ರೆ ! ಇದೇನು ಜೀವಿತದ ಅಂತಿಮಾವಸ್ಥೆಯೇ ? ಲಲಿತಾ ! ಲಲಿತಾ ! ಎಲ್ಲಿ ಲಲಿತೆ ? ಲಲಿತೆಯು ಕಾಣಿಸಲಿಲ್ಲ. ಅವಳೆಲ್ಲಿಗೆ ಹೋಗಿರಬಹುದು ? ತಿಳಿಯಿತು. ಆ ವಯೋವೃದ್ಧನೊಡನೆ ಬಲಾತ್ಕಾರದ ಮದುವೆ ! ಅದಕ್ಕೆ ಹೆದರಿರಬೇಕು ! ಪ್ರಾಣವನ್ನು ತೊರೆದಿರಬೇಕು. ಏನು ಮಾಡಲಿ ? ಲಲಿತೆಯನ್ನು ಹುಡುಕಲೆ ? ಅಥವಾ, ಇವರನ್ನು ಉಪಚರಿಸಲೆ ? ಆಹಾ ! ಪರ್ಯವಸಾನ ! ವ್ಯಸನಮಯ ಸಂಸಾರ ! ಅಸಹನೀಯ ಚಿಂತಾ ಜ್ವಾಲೆ !

ಲಲಿತೆಯು ಸತ್ತಿರಬೇಕು. ಇದೇನು ಸೀತೆಯ ಮೌನ ? ಅವಳೂ ಸತ್ತಿರಬಹುದೇ ? ಸೀತಾ ! ಉಹುಂ ! ಶ್ಯಾಮಲಾ ! ಶ್ಯಾಮಲಾ ! (ಶ್ಯಾಮಲೆಯನ್ನು ಮುಟ್ಟಿ ನೋಡುವನು) ಹೂಂ ! ಶ್ಯಾಮಲೆಯು ಮೂರ್ಛಿತಳಾಗಿರುವಳು. ಆನಂದ್ ! ಆನಂದ್ ! ಹೂಂ ! ಅವನಿಗೂ ಎಚ್ಚರವಿಲ್ಲ. ನನ್ನವರಿನ್ನಾರು ? ನಾನೊಬ್ಬನೇ !

ಸೀತಾ ! ಸೀತಾ ! ಅವಳ ಮಾತೂ ಇಲ್ಲ. ಆಹಾ ! ಘೋರಸಂಸಾರ ! ಪಾಷಾಣ ಕಲುಷಿತ ಜೀವನ ! ಆದ್ಯಂತ ಶೋಕಮಯ ದೃಶ್ಯ ! ವಿಷಮ ಪರಿಸ್ಥಿತಿ ! ಅಖಂಡ ದಾರಿದ್ರ್ಯ ! ದುರ್ಭರ ಜಠರಾಗ್ನಿ ! ಉಪವಾಸ ಪೀಡಿತ ಆಯಾಸ ! ಬಲವಂತ ನಿದ್ರೆ ! ಇದು ನನ್ನ ಸಂಸಾರದ ವಿಚಿತ್ರಮಯ ಚಿತ್ರ!

ಪ್ರಭಾಕರ ! ಪ್ರಿಯಮಿತ್ರ ! ನಿನ್ನದೇನು ತಡೆ ? ನನ್ನಲ್ಲಿ ನಿನಗೂ ಬೇಸರವೇ ? ಪ್ರಭಾಕರ್ ! ಇಂಥಾ ಅನಿವಾರ್ಯ ಶೋಕ ಸಮಯ – ಎಲ್ಲಿ ಡಾಕ್ಟರು ? ಪ್ರಭಾಕರ್ ! ಮುಕುಂದನನ್ನು ನೀನೂ ಮರೆತೆಯಾ ?

ಮರಣೋನ್ಮುಖ ಮುಕುಂದ! ಬಡತನದ ಬಡಬಾಗ್ನಿಯಿಂದ ಬೆಂದು ಹೋದ ಮುಕುಂದ! ನೀನು ಕಾದ ಕಬ್ಬಿಣದಂತೆ! ನಿನ್ನ ಬಳಿ ಸುಳಿವ ರಾರು? ಸವಿ ಮಾತನಾಡುವವರೆಲ್ಲಿ? ಬಂಧುಗಳೆಲ್ಲಿ? ಸ್ನೇಹಿತರೆಲ್ಲಿ? ಮುಗ್ಧಮುಕುಂದ! ನೋಡು. ಜಗತ್ತಿನ ಈ ಸಮಗ್ರ ಶೂನ್ಯತೆ! ಏಕೆ ಈ ಭ್ರಾಂತಿ! ಭ್ರಮೆಯನ್ನು ಬಿಡು. ಕಣ್ಣುಗಳನ್ನು ತೆರೆ-ನೋಡು. ಬಡತನದ ಬಲವಾದ ಬಲೆಯಲ್ಲಿ ಸಿಲುಕಿ ಬಿದ್ದು, ಬಿಡುಗಡೆ ಹೊಂದಲಸದಳವಾಗಿ, ಹಿಡಿದು ಹಂಗಿಸುವವರ ಮುಂದೆ ಅಯ್ಯೋ ಎಂದು ಅರ್ತನಾದದಿಂದ ಕೆಳ ಕ್ಕುರುಳಿದ—ಈ ಶೋಕ ಪರಿತಪ್ತ ಪೀಡಿತ ಪ್ರಾಣಿಗಳನ್ನು!

ಮುಕುಂದ! ಕಂಡಕಂಡವರ ಕಾಲಿಗೆ ಬಿದ್ದೆ. ಯಾಚಿಸಿದೆ. ನಲಿದು ನಟನವಾಡಿದೆ. ಆದರೇನು? ನಿನ್ನ ಕರ್ಮ ಕಥೆ! ಅದನ್ನು ಕೇಳಿ ಕಳವಳ ವಾರಿಗಾಯಿತು? ಹೆಜ್ಜೆ ಹೆಜ್ಜೆಗೂ ತಡವರಿಸಿದೆ. ಎಡವಿಬಿದ್ದೆ. ನಡನಡುಗಿ ಇಲ್ಲಿಗೆ ಬಂದೆ. ನೋಡು. ಕಣ್ತುಂಬ ನೋಡು. ಮುಕುಂದಾ! ಯಾರ ಕನಿ ಕರಕ್ಕಾಗಿ ಇನ್ನೂ ಇದಿರು ನೋಡುತ್ತಿರುವೆ? ಏತಕ್ಕೀ ಬಯಲು ಭ್ರಾಂತಿ! ನೋಡು! ಈ ಹತಭಾಗ್ಯ – ಶಕ್ತಿರಹಿತ - ನಿಸ್ತೇಜ– ಸತಿಸುತಸುತೆಯರನ್ನು! ನೀನಿವರ ಪೋಷಕನೋ! ಅವರು ನಿನ್ನಾಧೀನವೋ!

ಹುಂ! ಲಲಿತಾ! ಹೂಂ! ಹುಚ್ಚು! ಅವಳು ಪರಲೋಕದಲ್ಲಿರಬೇಕು! ಸೀತಾ! ಶ್ಯಾಮುಲಾ! ಆನಂದು! ಇದೇನು ನಿಮ್ಮೀ ಅಸಹಕಾರ? ಕಾಲ ಕಾಲಕ್ಕೆ ನಿಮಗೆ ಅನ್ನಬಟ್ಟೆಗಳನ್ನು ನಾನು ನೀಡಲಿಲ್ಲ. - ಕ್ಷಮಿಸಿ. ಆದರೆ ನಿಮ್ಮಲ್ಲಿ ನನಗೆ ಪ್ರೀತಿಯುಂಟು. ಅಸಹಕಾರಬೇಡ. ನಾನು-ಹತಾಶನಾದ ನಿಮ್ಮ ತಂದೆ! ಬಾಯಿ ತೆರೆದು ಒಬ್ಬರಾದರೂ ಒಂದು ಮಾತನ್ನಾಡುವುದಿಲ್ಲ ವೇಕೆ? ಹಾಯ್! ದೈವವೆ! ಹುಂ! ಎಲ್ಲಿಯ ದೈವ? ದಯಾಮಹಿಮ! ಸುಳ್ಳು! ಭಗವಂತ! ನೀನು ದಯಾಮಹಿಮನಾದಲ್ಲಿ ಹೇಳು. ಈ ಕಠೋರ ದೃಶ್ಯವು ನಿನಗೆ ಸರಿಯೆನಿಸಿತೇನು? ಭಗವಂತ! ನೀನು ಕರುಣಾಶಾಲಿಯೇ? ಹಾಗಿದ್ದಲ್ಲಿ,ಇವರೆಲ್ಲರೂ ಕ್ಷುದ್ಬಾಧೆಯಿಂದ ಕುಂದಿ, ಕೊರಗಿ, ಕುಸಿದುಹೋಗಿ, ಕಳಪೆಹೊಂದಿ, ಕೆಳಗುರುಳಿ ಮರಣೋನ್ಮುಖರಾಗುತ್ತಿದ್ದರೆ? ಇವರ ಈ ವೈಮರೆವು ನಿನಗೆ ಆನಂದಕರವೆಂದೆನಿಸಿತೇ?

ಮುಕುಂದ ! ಮೂಢತೆಯನ್ನು ಬಿಡು. ಸಾಕಲಾರದ ನಿನ್ನ ಪಾಪಿ ಹಸ್ತಗಳಿಂದ ಇವರನ್ನು ವಧಿಸು. ಬಳಿಕ ನೀನೂ ಅವರನ್ನು ಹಿಂಬಾಲಿಸು. ನೊಂದು ನಂದಿದವರನ್ನು ನೋಡಿ ನಗುವ ಸ್ವಾರ್ಥಾವಲಂಬನ ಸಮೂಹಕ್ಕೆ ಅರ್ಪಿಸು – ಈ ನಿರ್ಗತಿಕ - ನಿರಾಧಾರ – ನರಕಯಾತನಾ ಪೀಡಿತರ – ಶೋಕ ಕಲುಷಿತ ರಕ್ತದ ಕಾಣಿಕೆಯನ್ನು – ಅರ್ಪಿಸು. ಅಸಹ್ಯಕರವಾದೀ ಜೀವನವು ಇನ್ನು ಸಾಕು ! ಮುಕುಂದ ! ಮಾನವನ ಇತಿಹಾಸದಲ್ಲಿ–ಸಮಾಜ ಚರಿತ್ರೆಯಲ್ಲಿ - ನಿನ್ನ ಮತ್ತು ನಿನ್ನವರ - ಹೆಸರು ತೊಡೆದುಹೋಗಲಿ. ಯಾವ ಸಮಾಜದಲ್ಲಿ ಇಂತಹ ಸ್ಥಾನರಹಿತ – ನಿರ್ಗತಿಕ ಕುಟುಂಬಗಳು - ಕಳಂಕ ಮಯವೆಂದು – ಭಾವಿಸಲ್ಪಡುವುವೋ, ಆ ಸಮಾಜದಲ್ಲಿ ನಿನ್ನದೊಂದು ಕುಟುಂಬವು ಶಾಶ್ವತವಾಗಿ ಅಳಿದುಹೋಗಲಿ. ಮಾಯಾಮಯ ಸಮಾಜವೇ! ಇಷ್ಟವಿದ್ದಲ್ಲಿ ಮುಕುಂದನ ಅಂತ್ಯಕಾಲದ ವಂದನೆಗಳನ್ನು ಒಪ್ಪಿಸಿಕೋ.

ಮುಕುಂದ ! ಇನ್ನೇಕೆ ತಡವರಿಸುತ್ತಿರುವೆ ? ಅಖಂಡ ದಾರಿದ್ರ್ಯದ ಈ ಘೋರ ದೃಶ್ಯವನ್ನು ನೋಡಿನೋಡಿ ನಿನ್ನ ಹೃದಯವು ತುಂಡು ತುಂಡಾಗಿ ಇನ್ನೂ ಒಡೆದು ಹೋಗದಿರುವುದೇತಕ್ಕೆ ? ಹೂಂ ! ಏಕೆ ಸಂಶಯ ? ಸನ್ನದ್ಧನಾಗು ! ವಧಿಸು.

(ಕೈಯ್ಯಲ್ಲಿ ಕತ್ತಿಯನ್ನು ಹಿಡಿದು ಕೊಲೆ ಮಾಡಲುದ್ಯುಕ್ತನಾಗುವನು)

(ಅಷ್ಟರಲ್ಲಿ)

(ಸಾಧುವು ಪ್ರವೇಶಿಸಿ ಮುಕುಂದನ ಕೈಯ್ಯಲ್ಲಿರುವ ಕತ್ತಿಯನ್ನು ಕಿತ್ತುಕೊಂಡು)

ಸಾ:—ಮುಕುಂದ್ ! ಹಾಂ !

ಮು:—ಯಾರು ? (ದಿಗ್ಭ್ರಮೆಯಿಂದ) ಮತ್ತೆ ಸಾಧುಗಳು !

ಸಾ:—ಏನಿದು ? ಈ ಚಿತ್ತ ಭ್ರಮಣ ! ಅಚಾತುರ್ಯ ! ಈ ಸಂಯುಕ್ತ ವಧೆಗೆ ಪ್ರಯತ್ನ ! ಸಲ್ಲದು. ಸಲ್ಲದು.

ಮು:—ಅಹುದು. ಆದರೆ ನನ್ನನ್ನು ತಡೆಯಲು ಕಾರಣ ?

ಸಾ—ಪರಮಾತ್ಮನಿರುವನೆಂದು ಹೇಳಲೋಸುಗ ; ಎಷ್ಟೇ ಕಷ್ಟಬಂದರೂ ವಧೆಯು ಪಾಪಮಯವಾದುದೆಂದೂ, ಮಾನವೀನ್ಯಾಯಕ್ಕೂ, ದೈವ

ಶಾಸನಕ್ಕೂ ತೀರ ವಿರುದ್ಧವೆಂದೂ ಸ್ಪಷ್ಟವಾಗಿ ತಿಳಿಯಪಡಿಸ ಲೋಸುಗ.

ಮು:—ಕಷ್ಟಪರಂಪರೆಗಳಲ್ಲಿ ಮುಳುಗಿಹೋದ ನನಗೆ – ದಿಕ್ಕು ತೋರದ ನನಗೆ – ಜೀವಿತಕ್ಕೂ ಹತ್ಯಕ್ಕೂ ವ್ಯತ್ಯಾಸವು ಕಾಣುವುದಿಲ್ಲ.

ಸಾ:—ವ್ಯತ್ಯಾಸವು ಕಾಣಿಸದಿರುವುದಕ್ಕೆ ನಿಮ್ಮನ್ನಾವರಿಸುವ ಭ್ರಮೆಯೇ ಕಾರಣ.

ಮು:—ಭ್ರಮೆ! ನಿಜವಾಗಿ ನುಡಿದಿರಿ. ಅಷ್ಟಲ್ಲದೇನು? ನಾನು ಭ್ರಮಿಸಿ ಭ್ರಮಿಸಿಯೇ ಜಗತ್ತಿನಲ್ಲಿ ಮೋಸಹೋದೆ. ಇಲ್ಲದಿದ್ದರೆ ನನ್ನ ಆಪ್ತ ಸ್ನೇಹಿತ - ಪ್ರಭಾಕರನೆಲ್ಲಿ? ಡಾ॥ಮನೋಹರ್–ಅವರೆಲ್ಲಿ? ನೋಡಿ. ಸಾಧುವರ್ಯರೇ! ಕಣ್ಣಾರೆ ನೋಡಿ. ಚಿಕಿತ್ಸೆಯಿಲ್ಲದೆ ಮೂರ್ಛಿತ ಳಾದ ಈ ಶ್ಯಾಮಲೆ! ಕೈಹಿಡಿದ ಹೆಂಡತಿ–ಈ ಸೀತಾ! ಅರಿಯದ ಹಸು ಬಾಲಕ - ಈ ಮುದ್ದು ಆನಂದ್! ಇವರೊಂದು ತುತ್ತು ಅನ್ನ ವನ್ನು ಯಾವಾಗ ತಿಂದರೋ ತಿಳಿಯದು. ಉಪವಾಸದಿಂದ ಆಯಾ ಸವು ಪ್ರಬಲಿಸಿ ಕೆಳಗುರುಳಿದರು. ಇದು ಸಾಲದೆಂದು ಬಲವಂತ ವಿವಾಹವನ್ನು ತೊಡೆದುಹಾಕಲೋಸುಗ ನನ್ನ ಪ್ರೇಮದ ಅರಗಿಳಿ - ಲಲಿತೆಯು - ಪ್ರಾಣಹತ್ಯ ಮಾಡಿಕೊಂಡಿರಲೇಬೇಕು. ಇದಿಷ್ಟು ಅನರ್ಥ ಪರಂಪರೆಗಳ ನಡುವಿನಲ್ಲಿ ನಿಂತು ಪರಮಾತ್ಮನ ಇರುವಿಕೆ ಯನ್ನು ನಿರೂಪಿಸುವುದಕ್ಕೆ ಬಂದ ತಾವು ಭ್ರಮಿಸಿರುವಿರೋ? ಅಥವಾ, ನಾನು ಭ್ರಮಿಸಿರುವೆನೋ? ಸಾಧುಗಳೇ! ತಮಗೂ ನನ್ನ ಸಹಸ್ರ ವಂದನೆಗಳು! ಮುಕುಂದನು ಮತ್ತಾವ ಮಹತ್ಕಾರ್ಯವನ್ನು ಸಾಧಿ ಸುವುದಾವಶ್ಯವೆಂದರಿತು ಅವನ ಜೀವನವನ್ನು ಮುಂದುವರಿಸಲು ತವಕಗೊಂಡಿರುವಿರಿ? ಸಾಧುಗಳೇ! ಮನ್ನಿಸಿ. ನನ್ನನ್ನು ಬಿಡಿ. ತಡೆಮಾಡಬೇಡಿ. ಇನ್ನಾವ ಪರಮಾತ್ಮನ ಕರುಣೆಯನ್ನು ನಾನು ಇದಿರುನೋಡಬೇಕಾಗಿದೆ? ಪರಮಾತ್ಮನೆಂಬುದು ಬರಿಯ ಭ್ರಾಂತಿ!

ಸಾ:—ನಿಜ. ಒಪ್ಪಿಕೊಳ್ಳತಕ್ಕುದೇ! ಈ ಕ್ಷಣದಲ್ಲಿ ಪರಮಾತ್ಮನೆಂದರೆ ನಿಮಗದೊಂದು ಭ್ರಾಂತಿಯಾಗಿ ಕಾಣತಕ್ಕುದೇ ಸಹಜ! ಆ ಭ್ರಾಂತಿ

ಯನ್ನು ತೊಲಗಿಸಿ - ಜೀವಿತದ ನೆಲೆಯನ್ನೂ, ಗುರಿಯನ್ನೂ, ನೈಜಿಕ ತತ್ವಾರ್ಥವನ್ನೂ ಸ್ಪಷ್ಟವಾಗಿ ನಿರೂಪಿಸಿಕೊಡುವುದು ಭಗವಂತನಿಗೇ ಸೇರಿದ ಭಾರವಾಗಿದೆ. ಕಾರಕ, ಪ್ರೇರಕ, ಪ್ರೋತ್ಸಾಹಕ, ಸಂರಕ್ಷಕನೂ ಪರಮಾತ್ಮನೇ ಅಲ್ಲದೆ ಮತ್ತಾರು ? ನೋಡಿ, ಪೌರುಷಹೀನವಾದ ಈ ಕೊಲೆ ಪಾತಕವು ಪರಮಾತ್ಮನಿಗೆ ತಿಳಿಯದೆ ಇಲ್ಲ. ಆತನು ಸರ್ವಾಂತರ್ಯಾಮಿಯಾದುದರಿಂದಲೇ ಈ ನೀಚ ಕೊಲೆಯನ್ನು ಸಕಾಲದಲ್ಲಿ ಕೊನೆಗಾಣಿಸಿದುದು. ಮುಂದೆ ನಿಮಗೊದಗಲಿರುವ ಸುಯೋಗಗಳನ್ನು ತೋರಿಕೊಡುವವನೂ ಪರಮಾತ್ಮನೇ! ನಿಮ್ಮನ್ನು ಪರೀಕ್ಷಿಸಲೋಸುಗವೇ ಇದಿಷ್ಟು ಅನರ್ಥಗಳಿಗೆ ಪರಮಾತ್ಮನು ನಿಮ್ಮನ್ನು ಗುರಿಮಾಡಿದನೆಂದು ನಾನು ನಂಬಿದ್ದೇನೆ. ನಿಶ್ಚಿತ ಕಾಲವು ಸನ್ನಿಹಿತವಾದರೆ ಪರಮಾತ್ಮನ ಸಂಕಲ್ಪವು ತಾನಾಗಿಯೇ ಹೊರಬೀಳುವುದು. ಅಷ್ಟರೊಳಗೆ ಆತುರಪಡಲು ಕಾರಣ ?

(ಪ್ರವೇಶ ಡಾ|| ಮನೋಹರ್—ಶ್ಯಾಮಲೆ ಮೊದಲಾದವರನ್ನು ಎಚ್ಚರಗೊಳಿಸಿ ಅವರಿಗೆ ಪಾನೀಯಗಳನ್ನು ಕುಡಿಸುವನು.)

(ಪ್ರವೇಶ : ಜಗಜೀವನದಾಸ್)

ಜ:—ಮುಕುಂದ್ ! ಮುಕುಂದ್ !

ಮು:—ಯಾರು ? ನನ್ನ ಒಡೆಯರು ! ಸ್ವಾಮಿ ! ತಾವು ! ಈಗ ! ಇಲ್ಲಿ ? ಏನು ಕಾರಣ ? ತಮಗೆ ನಾನು ತೆರಬೇಕಾದ ದಂಡವು ಇನ್ನೂ ಬಾಕಿ ಯಿರುವುದೇ ?

ಜ:—ಮುಕುಂದ್ ! ನೀವು ನನಗೆ ದಂಡ ತೆರಬೇಕೆ ? ಇಲ್ಲ, ಇಲ್ಲ; ನಿಮಗೆ ನಾನು ದಂಡ ತೆರಬೇಕು. ನಿಮ್ಮ ದುರ್ಭರ ದಾರಿದ್ರ್ಯಕ್ಕೆ - ಈ ಸಂಯುಕ್ತವಧಾ ಪ್ರಯತ್ನಕ್ಕೆ - ಪ್ರಧಾನ ಕಾರಣನು ನಾನು - ಪರಮ ಪಾತಕಿ ! ಇನ್ನ ರಕ್ಷಣ ನಿಧಾನವಾಗಿದ್ದಲ್ಲಿ – ಇದಿಷ್ಟು ನಿರ್ದೋಷಿಗಳ ಕೊಲೆಗೆ ನಾನು ಕಾರಣನಾಗಿ – ಅವರ ರಕ್ತಪಾತದಲ್ಲಿ ಬಿದ್ದು ಹೊರಳಾಡುತ್ತಿದ್ದೆ.

ಮು:—ಏನು ? ತಪ್ಪಿತಸ್ಥರು ತಾವೇ ? ಅದು ಹೇಗಾದೀತು ? ನಾನು ನಂಬಲಿಲ್ಲ. ಅದಿರಲಿ. ತಾವು............ಈ ಅಲ್ಪನಮೇಲೆ ಕರುಣೆ

ಯಿಟ್ಟು ..........ಈ ಕೊಳಕು ಭಿಕಾರಿಯಮೇಲೆ ಕನಿಕರಗೊಂಡು - ಇಲ್ಲಿಗೆ ಬಂದಿರಾ? ಇದೇನು ? ನನ್ನ ಮನಸ್ಸಿನ ವಿಕಲ್ಪವೇ ? ನಾನೇ ನಾದರೂ ಕನಸು ಕಾಣುತ್ತಿರುವೆನೇ ? ಈಗ ನಾನೆಲ್ಲಿರುವೆನು ?

ಜ:—ಮುಕುಂದ್ ! ಮುಕುಂದ್ ! ಈ ಶೋಕವನ್ನು ಬಿಡಿ.

ಮು:—ತಾವು ಇಲ್ಲಿಗೆ ದಯಮಾಡಿಸಿದ ಕಾರ್ಯ ?

ಜ:—ಈ ಸಾಧುವರ್ಯರ ಆಜ್ಞೆಯನ್ನು ಪರಿಪಾಲಿಸುವುದಕ್ಕಾಗಿ !

ಮು:—ಸಾಧುವರ್ಯರೇ! ನನ್ನ ಬುದ್ಧಿಯು ಭ್ರಮಿಸಿರುವುದು. ನನ ಗೊಂದೂ ತಿಳಿಯಲಿಲ್ಲ. ತಾವಾದರೂ ಅಪೂರ್ವ ಜ್ಞಾನಿಗಳು. ಎರಡಾ ವರ್ತಿ ಕ್ರೂರವಾದ ಆತ್ಮಹತ್ಯೆ - ಮತ್ತು ನೀಚ ಕೊಲೆಗನುವಾದ ನನ್ನ ಹಸ್ತಗಳನ್ನು ತಡೆದಿರಿ. ಈ ಸಮಸ್ಯೆಯನ್ನು ಬಿಚ್ಚಿಹೇಳಿ. ಈ ನನ್ನ ಹಿತೈಷಿಗಳು - ಪರಿಪೋಷಕರು - ಇವರು - ಈ ಸಮಯದಲ್ಲಿ - ಇಲ್ಲಿಗೆ ಬಂದುದು ಹೇಗೆ? ಏತಕ್ಕೆ ?........ಅಲ್ಲದೆ........ನನ್ನ ಸಂರಕ್ಷಣೆ ಯಲ್ಲಿ ಇಷ್ಟೊಂದು ತವಕಗೊಳ್ಳುತ್ತಿರುವ ತಾವು ಯಾರು ?

ಸಾ:—(ಜಗಜೀವನ್‌ದಾಸ್‌ರವರನ್ನು ತೋರಿಸಿ) ಇವರೇ ಹೇಳುವರು.

ಜ:—ಮುಕುಂದ್ ! ನೀವು ನಿರಪರಾಧಿ !

ಮು:—ಹಾಂ! ಏನೆಂದಿರಿ? ನಾನು ನಿರಪರಾಧಿ! ಅಹುದೇ?

ಜ:—ಅಹುದು. ನಿರಪರಾಧಿ !

ಮು:—ನಾನು ನಂಬಲಾರೆ. ಇದಿಷ್ಟು ಜನರ ಕೊಲೆಗೆ ಉದ್ಯುಕ್ತನಾದ ನಾನು ನಿರಪರಾಧಿಯೇ ?

ಜ:—ಆ ವ್ಯಥೆಯನ್ನು ಬಿಡಿ. ನಿಮ್ಮನ್ನು ನಿರುದ್ಯೋಗಿಗಳನ್ನಾಗಿ ಮಾಡಿ, ಭೀಷಣವಾದ ಬಡತನಕ್ಕೆ ಒಳಪಡಿಸಿ – ಈ ಅನರ್ಥಪರಂಪರೆಗಳಿಗೆ ಅಡಿಗಡಿಗೆ ಗುರಿಮಾಡಿದ ಪಾಪಿ ನಾನು. ಮುಕುಂದ್ ! ಅದಕ್ಕಾಗಿ ನನ್ನನ್ನು ಮನ್ನಿಸುವಿರಾ ?

(ಪ್ರವೇಶ : ಪಾಂಡುರಂಗ)

ಮು:—ನಾನು ! ತಮ್ಮನು. ಮನ್ನಿ. ಸುವುದೇ? ಹಾಂ ! ಇದೇನು ವಿಚಿತ್ರ !

ಜ:—ಅಹುದು ಮುಕುಂದ್! ನನ್ನನ್ನು ಮನ್ನಿಸಿ. ಆ ದುರಾತ್ಮರು – ರಾಮನಾಥ್ – ರಘುವೀರ್ – ಅವರಿಬ್ಬರೂ – ಅನೇಕಾನೇಕ ಛಪಾವಣೆಗಳನ್ನು ಮಾಡಿದರು. ೧೮,೦೦೦ ರೂಪಾಯಿಗಳನ್ನು ದುರುಪಯೋಗಪಡಿಸಿದರು. ಅವರು ಕಾರಾಗೃಹದಲ್ಲಿ ತಳ್ಳಲ್ಪಟ್ಟರು. ಮುಕುಂದ್! ನಿಮ್ಮ ಪ್ರಾಮಾಣಿಕತೆಯು ಸ್ಪಷ್ಟವಾಗಿ ಸ್ಥಿರಪಟ್ಟಿತು. ಇದನ್ನು ವೃತ್ತಪತ್ರಿಕೆಗಳಲ್ಲಿಯೂ ಪ್ರಕಟಿಸಿದ್ದೇನೆ. ಅಲ್ಲದೆ ನಿಮಗೆ ಮತ್ತೆ ಮ್ಯಾನೇಜರ್ ಪದವಿಯು ಸಿದ್ಧವಾಗಿರುವುದು. ಅದನ್ನು ಸ್ವೀಕರಿಸಬೇಕೆಂದು ನನ್ನ ಕೋರಿಕೆ. ಇದೋ! ನೀವು ದಂಡವಾಗಿ ತೆತ್ತ ಎರಡು ಸಾವಿರ! ಅದಕ್ಕಾಗಿ ಬಡ್ಡಿವೊದಲಾಗಿ - ಇನ್ನೆರಡು ಸಾವಿರ - ನ್ಯಾಯವಾಗಿ ನಾಲ್ಕುಸಾವಿರ - ನನ್ನ ಪ್ರಿಯದಿಂದ ಮತ್ತೆರಡು ಸಾವಿರ - ಒಟ್ಟು ಆರು ಸಾವಿರ ರೂಪಾಯಿ. ಇದೋ ಹಿಡಿಯಿರಿ (ಎಂದು ಚೆಕ್ಕನ್ನು ಕೊಡುವನು.)

ಮು:—ಹಾಂ! ಇದೆಲ್ಲವೂ ಏನು ಪರಿಹಾಸ್ಯವೇ! ನಾನು ನಿರಪರಾಧಿ! ಮತ್ತೆ ಮ್ಯಾನೇಜರ್ ಪದವಿ! ಆರು ಸಾವಿರ! ಇಲ್ಲ, ಇದೆಲ್ಲವೂ ಬರಿಯ ಭ್ರಾಂತಿ! ಕಳ್ಳ ಕನಸು! ನಾನು ನಂಬುವುದಿಲ್ಲ! ಈಗ ನಾನೆಲ್ಲಿರುವೆನು?

ಸಾ:—ಪರಮಾತ್ಮನ ಸಂಕಲ್ಪದ ಬಂಧನದಲ್ಲಿ -

ಮು:—ಅಹುದು, ಈಗ ತಿಳಿಯಿತು. ಮುಕುಂದ! ಮುಗ್ಧ ಮುಕುಂದ! ಸಾಧುಗಳೇ! ನನ್ನ ಮೌಢ್ಯವನ್ನು ಕ್ಷಮಿಸಿ. ದೈವವಿರುವುದು. ಮುಕುಂದ! ನಿನ್ನ ಭಾಗಕ್ಕೆ ಪರಮಾತ್ಮನಿರುವನು! ಹಲವು ರೂಪಗಳಲ್ಲಿ ಪ್ರತ್ಯಕ್ಷನಾಗಿರುವನು!

(ಎಂದು ಸಾಧುಗಳಿಗೂ ಜಗಜೀವನದಾಸರವರಿಗೂ ವಂದಿಸುವನು.)

(ಬಳಿಕ ಮೇಲೆದ್ದು) ಆದರೆ, ಆದರೆ............ನನ್ನ ಲಲಿತೆಯೆಲ್ಲಿ? ಅವಳನ್ನೆಲ್ಲಿ ಕಾಣಲಿ? ಸೀತಾ! ನೀನೇನಾದರೂ ಲಲಿತೆಯನ್ನು ನೋಡಿದೆಯಾ? ಅವಳನ್ನು ಎಲ್ಲಿಯಾದರೂ ಕಳುಹಿಸಿರುವೆಯಾ?

ಸೀ:—ಅಹುದು, ನಿಮ್ಮನ್ನು ಹುಡುಕಿಕೊಂಡು ಬರುವುದಕ್ಕೆ.

ಮು:—ಹಾಂ ! ಪರಮಾತ್ಮ ! ನನ್ನ ಲಲಿತೆ ! ಅವಳ ಸಂರಕ್ಷಣೆಯು ನಿನ್ನನ್ನೇ ಸೇರಿದ್ದಲ್ಲವೆ ?

(ಪಾಂಡುರಂಗನನ್ನು ನೋಡಿ)

ಸ್ವಾಮಿ ! ತಮ್ಮ ಸಾಲವನ್ನು ಹರಿಸಿ ಬಿಡುತ್ತೇನೆ. ಇನ್ನು ತಡೆಮಾಡ ವುದಿಲ್ಲ. ಸಾವಕಾಶವಾದುದಕ್ಕೆ ಕ್ಷಮಿಸಿ.

ಪಾಂ:—ಮುಕುಂದರಾಯರೇ ! ತಮ್ಮಲ್ಲಿ ನನಗೆಂತಹ ಸಾಲ ? ತಮ್ಮ ಪ್ರಾಮಾಣಿಕತೆಯನ್ನು ಅನೇಕಾವರ್ತಿ ಪ್ರತ್ಯಕ್ಷವಾಗಿ ನೋಡಿಯೂ ನಾನರಿಯದೆ ಹೋದೆ. ಅನವಸರವಾಗಿ ಕುಪಿತನಾಗಿ ತಮ್ಮನ್ನು ಕಾಡಿದೆ. ಮನ್ನಿಸಿ. ನಾನು ಸಾಲವನ್ನು ಕೇಳಲು ಇಲ್ಲಿಗೆ ಬರಲಿಲ್ಲ. ತಮ್ಮ ಕುಟುಂಬಕ್ಕೆ ನನ್ನಿಂದುಂಟಾದ ಶೋಕಪರಂಪರೆಯ ಪರಿಣಾಮವಾಗಿ - ಈ ಕೊಲೆಯ ಪ್ರಯತ್ನಕ್ಕೆ ಕಾರಣನಾದ ನನ್ನನ್ನು ಧಾರಾಳವಾಗಿ ಮನ್ನಿಸಿ. ಈ ಪ್ರಬಲ ಕಷ್ಟಗಳಿಗೆ ಪ್ರಧಾನ ಕಾರಣವೆಂದರೆ ನಾನು ತಮಗೆ ಕೊಟ್ಟ ಸಾಲ. ಆದುದರಿಂದ ಆ ಸಾಲವನ್ನು ನಾನು ಬಿಟ್ಟಿರು ವೆನು. ಅಲ್ಲದೆ ಇನ್ನು ಮುಂದೆ ನನ್ನಿಂದ ತಮಗೇನಾದರೂ ಸಹಾಯವು ಬೇಕಾಗಿದ್ದಲ್ಲಿ ಅದಕ್ಕೆ ನಾನು ಸದಾ ಕಾಲದಲ್ಲಿಯೂ ಸಿದ್ಧನಾಗಿರುವೆ ನೆಂದು ಹೇಳಲು ಇಲ್ಲಿಗೆ ಬಂದೆ.

ಮು:—ಹಾಗಾದರೆ ನನ್ನ ಲಲಿತೆ ? ಅವಳೆಲ್ಲಿ ?

(ಪ್ರವೇಶ : ಲಲಿತಾ)

ಲಲಿತ:—ಅಪ್ಪಾ ! ಅಪ್ಪಾ !

ಮು:—ಲಲಿತಾ ! ಲಲಿತಾ ! (ಎಂದು ಲಲಿತೆಯನ್ನು ಹಿಡಿದುಕೊಳ್ಳುವನು) ಲಲಿತ ! ನೀನೆಲ್ಲಿ ಹೋಗಿದ್ದೆ ?

ಲಲಿತ:—ಪಾಂಡುರಂಗ ದೇವನ ಬಳಿಗೆ.

ಮು:—ನನ್ನನ್ನು ಋಣಮುಕ್ತನನ್ನಾಗಿ ಮಾಡುವುದಕ್ಕಾಗಿಯೇ ?

**ಲಲಿತ:—ಆ ಪುಣ್ಯವು ಈ ಪೂಜ್ಯರಿಗೆ ಸಲ್ಲತಕ್ಕದ್ದು. ಇವರೇ ನಮ್ಮಭಾಗದ ಸಾಕ್ಷಾತ್ ಪಾಂಡುರಂಗದೇವರು (ಎಂದು ಪಾಂಡುರಂಗನಿಗೆರಗುವಳು)**

ಪಾಂ:—(ಲಲಿತೆಯನ್ನು ಹಿಡಿದೆಬ್ಬಿಸಿ) ಅಮ್ಮಾ! ಏಳು. ನಾನು ಅಷ್ಟೊಂದು ಪ್ರಶಂಸೆಗೆ ಪಾತ್ರನಲ್ಲ. ನಾವೆಲ್ಲರೂ ಪಾಂಡುರಂಗದೇವನ ಆಜ್ಞಾ ಧಾರಕರಷ್ಟೆ. ಆತನ ಸಂಕಲ್ಪಕ್ಕೆ ಒಳಪಟ್ಟವರು. (ಮುಕುಂದ ಮುಂತಾದವರನ್ನು ನೋಡಿ) ಅಂದು ಈಕೆಯು ಹುಟ್ಟಿದ ಹಬ್ಬದ ದಿವಸ ಲಲಿತೆಯ ಅಪೂರ್ವ ಸೌಂದರ್ಯಾತಿಶಯಗಳನ್ನು ನೋಡಿ ಮುಗ್ಧನಾದೆ. ಇವಳನ್ನು ಮದುವೆಮಾಡಿಕೊಳ್ಳಬೇಕೆಂಬ ಚಪಲವು ನನ್ನ ಮನಸ್ಸಿನಲ್ಲಿ ಹುಟ್ಟಿತು. ಧನ ಮದಾಂಧನೂ ಕಾಮಪೀಡಿತನೂ ಆದ ನಾನು ಈ ಲಲಿತೆಯನ್ನು ಮದುವೆಮಾಡಿಕೊಡಬೇಕೆಂದು ನಿಮ್ಮಿಂದ ಪ್ರಮಾಣವನ್ನು ಪಡೆದು ಸಾಲವನ್ನು ಕೊಟ್ಟೆ. ನನ್ನ ಚಪಲವು ದಿನೇ ದಿನೇ ಹೆಚ್ಚುತ್ತ ಬಂದಿತು. ವಿವಾಹಕ್ಕೆ ಬಲವಂತ ಪಡಿಸಿದೆ. ನನ್ನ ಕಟ್ಟಿನಲ್ಲಿ ಸಿಲುಕಿಬಿದ್ದ ಈ ಮುಕುಂದರಾಯರು—ಅವರ ಬಂಧನದಲ್ಲಿರುವ ಈ ಲಲಿತೆ— ಇವರೇನನ್ನು ತಾನೆ ಮಾಡಬಲ್ಲರು ? ಮುಕುಂದ ರಾಯರ ದುಃಖ ! ಎಡೆಬಿಡದ ಲಲಿತೆಯ ಮನಃಕ್ಲೇಶ ! ಅದಕ್ಕೆ ಕಾರಣವಾದ ಬಲಾತ್ಕಾರ ವಿವಾಹ ಪ್ರಯತ್ನ ! ಹೂಂ ! ಇಂದು ಈ ಲಲಿತೆಯಿಂದ ಅರಿತೆನು. ಕೂಲಂಕಷವಾಗಿ ಅರಿತೆನು. ನನ್ನ ಮನೋವೈಕಲ್ಯದ ಪ್ರತಿಫಲವಾದೀ ಅನರ್ಥ ಸಂಭವಗಳನ್ನು — ರಕ್ತಪಾತ ಸನ್ನಿವೇಶಗಳನ್ನು ! ಈ ಲಲಿತೆಯಿಂದ ನನ್ನ ಅಜ್ಞಾನವು ತೊಲಗಿತು. ಲಲಿತೆಯು ಚಿಕ್ಕ ವಯಸ್ಸಿನವಳಾದರೂ ಬಹು ಪ್ರಾಜ್ಞಳು. ಅವಳ ದಿವ್ಯ ಜ್ಞಾನ ! ಜನನೀ ಜನಕರರಮೇಲಣ ಪ್ರೇಮ ! ಸಹೋದರ ಪ್ರೀತಿ ! ಎಲ್ಲಕ್ಕೂ ಮಿಂಚಿ-ಶ್ರೀ ಪಾಂಡುರಂಗ ದೇವನಲ್ಲಿ ಅವಳಿಗಿರುವ ನಿಶ್ಚಲ ಭಕ್ತಿ—ಇವು ನನಗೆ ಪ್ರತ್ಯಕ್ಷ ಪ್ರಮಾಣವಾದುವು. ಇನ್ನೇಕೆ ಲಲಿತೆಯ ಮೇಲಣ ಮೋಹ ? ಅವಳು ನನ್ನ ಸಹೋದರಿಯಂತೆ! ನನ್ನಿಂದ ಅವಳಿಗುಂಟಾದ ಅಪಾರ ಮನಃಕ್ಲೇಶದ ಪ್ರಯುಕ್ತ ನನ್ನನ್ನು ಮನ್ನಿಸಬೇಕೆಂದು ಅವಳನ್ನು ದೈನ್ಯದಿಂದ ಬೇಡಿಕೊಂಡಿರುವೆನು. ಇನ್ನು ಮುಕುಂದರಾಯರಲ್ಲಿ ನನಗೆಂತಹ ಸಾಲ ? ಅವರು ನನ್ನನ್ನು ಉದಾರತೆಯಿಂದ ಮನ್ನಿಸಿದರಲ್ಲದೆ ನನ್ನ ಮನಸ್ಸಿಗೆ ನೆಮ್ಮದಿಯುಂಟಾಗಲಾರದು.

ಮು:—ಸ್ವಾಮಿ ! ಪಾಂಡುರಂಗರಾಯರೇ ! ಇದೆಲ್ಲವೂ ಶ್ರೀ ಪಾಂಡುರಂಗ ದೇವನ ಸತ್ಯಸಂಕಲ್ಪ ! ಇನ್ನು ಚಿಂತಿಸಲೇತಕ್ಕೆ ?

ಸಾ:—ಅಹುದು. ಗ್ರಹಚಾರ ಪರಂಪರೆಗಳು ಮೇಲಿಂದ ಮೇಲೆ ಬಂದುವು; ಅಳಿಯುವ ಕಾಲವು ಒದಗಿತು. ಹೇಳದೆ ಕೇಳದೆ ಓಡಿಹೋದುವು. ಇದು ದೈವಸಂಕಲ್ಪವಲ್ಲದೆ ಮತ್ತೇನು ?

ಮು:—(ಡಾಕ್ಟರ್ ಮನೋಹರರನ್ನು ನೋಡಿ) ಡಾಕ್ಟರೇ ! ಅನೇಕ ಕಠಿಣ ಸಂದರ್ಭಗಳಲ್ಲಿ ತಾವು ನನಗೆ ಮಾಡಿದ ಉಪಕಾರಕ್ಕೆ - ಅಪರಿಮಿತ ವಾದ ಸಹಾಯಕ್ಕೆ — ನನ್ನ ಕೃತಜ್ಞತೆಯನ್ನೆಂತು ತಮಗೆ ತೋರಲಿ ? ಮೃತ್ಯುವಶಳಾದ ನನ್ನ ಕಂದ ಲಲಿತೆಯ ಪ್ರಾಣವನ್ನು ಎಡಾವರ್ತಿ ಸಂರಕ್ಷಿಸಿದಿರಿ. ಅವಳ ಮನಸ್ಸಂತೂ ತಮ್ಮಲ್ಲಿಯೇ ಕಲೆತುಹೋಗಿರುವುದು. ಅವಳ ಹಸ್ತವನ್ನು ಸ್ವೀಕರಿಸಿ, ಅವಳನ್ನು ವಿವಾಹಮಾಡಿಕೊಳ್ಳಲು ಅಂಗೀಕರಿಸುವಿರಾ? ಅಮ್ಮಾ ಲಲಿತ ! (ಎಂದು ಲಲಿತೆಯನ್ನು ನೋಡುವನು - ಲಲಿತೆಯ ಮುಖವು ಅರಳು ವುದು.)

ಡಾ:—ಎಲ್ಲಾ ತಮ್ಮ ವಿಶ್ವಾಸ ! ಪರಮಾತ್ಮನ ಸಂಕಲ್ಪ ! ಲಲಿತೆಯ ಇಷ್ಟವು ಹಾಗಿದ್ದಲ್ಲಿ ಆಗಬಹುದು.

ಸಾ:—ಮುಕುಂದರಾಯರೇ ! ತಾವು ಈ ಲಲಿತೆಗೆ ಜನ್ಮದಾತರು ! ಆದರೆ ಈ ಪಾಂಡುರಂಗರಾಯರು ಆಕೆಯ ಪ್ರಾಣಸಂರಕ್ಷಕರು. ಇಲ್ಲಿ ನೆರೆ ದಿರುವವರಲ್ಲಿ ವಯೋವೃದ್ಧರು ! ಆದುದರಿಂದ ಲಲಿತೆಯನ್ನು ಆಶೀರ್ವದಿಸಿ ಅವರೇ ಆಕೆಯನ್ನು ಡಾಕ್ಟರವರಿಗೆ ಒಪ್ಪಿಸಲಿ.

ಪಾಂ:—ಆಹಾ ! ಇದಕ್ಕಿಂತ ಸಂತೋಷಕರವಾದ ಕಾರ್ಯವು ಮತ್ತೊಂ ದುಂಟೇ ?

ಜ:—ಅತ್ಯುತ್ತಮವಾದ ಯೋಚನೆ !

ಪಾಂ:—ಲಲಿತಾ ! ಸುಕುಮಾರಿ ! ಬಾಮ್ಮಾ ! ಅಹುದು. ಶ್ರೀಪಾಂಡುರಂಗನ ಸಾಕ್ಷಿಯಾಗಿ ನೀನು ನನ್ನ ಮಗಳಿಗೆ ಸಮಾನ ! (ಎಂದು ಹೇಳಿ ಅವಳ ಹಸ್ತವನ್ನು ಡಾಕ್ಟರವರ ಹಸ್ತದಲ್ಲಿಟ್ಟು ಕೂಡಿಸಿ) ಜೈ ಪಾಂಡುರಂಗ !

ಜೈ! ವಿಟ್ಠಲ! (ಎಂದು ಜೈಕಾರವಮಾಡಿ) ಜಗದೀಶ್ವರನು ನಿಮಗೆ ಚಿರಾಯುರಾರೋಗ್ಯ ಐಶ್ವರ್ಯಾದಿ ಸಕಲ ಸನ್ಮಂಗಳನ್ನೂ ಕರುಣಿಸಲಿ!

ಮು:—ಆಹಾ! ಇದೇನು ಮತಿಭ್ರಮಣ! ಈ ಸಂತೋಷ ಸಮಯದಲ್ಲಿ ನನ್ನ ಪ್ರಿಯ ಸ್ನೇಹಿತ ಪ್ರಭಾಕರನು ಬಾರದಿರಲು ಕಾರಣ? ಅಹುದು; ಮುಕುಂದನ ಸುಖ ಶೋಕಗಳೆರಡೂ ಪ್ರಭಾಕರನಿಗೆ ಸಮಾನವೇ ಅಲ್ಲವೆ? ಹೂಂ! ಡಾಕ್ಟರೇ! ತಾವೇನಾದರೂ ಆ ನನ್ನ ಆಪ್ತಸ್ನೇಹಿತ ನನ್ನು ಕಂಡಿದ್ದಿರಾ? ಇಂದು ತಮ್ಮನ್ನು ಇಲ್ಲಿಗೆ ಕರೆತರುವೆನೆಂದು ಹೇಳಿದ ಆತನು ಇನ್ನೂ ಇಲ್ಲಿಗೆ ಬರದಿರಲು ಕಾರಣ?

ಡಾ:—ಅವರು ಬರುತ್ತೇನೆಂದೇ ನನ್ನಲ್ಲಿ ಹೇಳಿದರು. ಆದರೂ ಅವರಿಗಾವ ತೊಂದರೆಗಳಿರಬಹುದೋ—ಕಂಡವರಾರು?

ಮು:—ಅಹುದು. ನನ್ನ ಪ್ರಭಾಕರ! ನನ್ನ ಹಿತಕ್ಕಾಗಿ ಎಂತಹ ತೊಂದರೆಗಳನ್ನೂ ಲೆಕ್ಕಿಸದೆ ಸಹಾಯ ಸೇವೆಗಳಿಂದ - ಪ್ರಾಣಕ್ಕೆ ಪ್ರಾಣವನ್ನು ಒಪ್ಪಿಸುವ ಪರಮ ಮಿತ್ರನೆಂದರೆ ಪ್ರಭಾಕರನೇ! ಇಂದು ನನ್ನ ನವಜೀವಿತದ ಉದಯವನ್ನು ಪ್ರಭಾಕರನು ನೋಡಬೇಕಲ್ಲವೆ?

ಸಾ:—ಮುಕುಂದರಾಯರೇ! ಇಹಲೋಕವೇ ವೈಕುಂಠವಾಸವಾಗಿ ಪರಿಣಮಿಸಬೇಕಾದರೂ, ಅಥವಾ, ನರಕದ ಘೋರ ಚಿತ್ರವಾಗಿ ಕಾಣಿಸಬೇಕಾದರೂ, ಸಹವಾಸವು ಪ್ರಬಲವಾದುದಲ್ಲವೆ? ರಾಮನಾಥ-ರಘುವೀರರ ಸಹವಾಸದ ಪ್ರತಿಫಲವನ್ನು ಪ್ರತ್ಯಕ್ಷವಾಗಿ ಅರಿತೂ ಅರಿತೂ ಇನ್ನೇತಕ್ಕೆ ಈ ಭ್ರಮೆ? ಈ ಪ್ರಭಾಕರನ ಸ್ನೇಹವು ಎಂತಹುದೆಂದು ಹೇಳಲು ಸಾಧ್ಯವೆ?

ಮು:—ಸಾಧುವರ್ಯರೆ! ಕ್ಷಮಿಸಿ! ನನ್ನ ಪ್ರಭಾಕರನು ಅಂತಹವನಲ್ಲ. ಈ ಸಮಯದಲ್ಲಿ ಆತನು ಇಲ್ಲಿಗೆ ಬಾರದಿರಲು ಕಾರಣವಿರಬೇಕು.

ಸಾ:—ಇರಬಹುದು. ಆದರೂ ಪ್ರಭಾಕರನನ್ನು ನೋಡಿಯೇ ತೀರಬೇಕೆಂಬುದು ನಿಮ್ಮ ಸಂಕಲ್ಪವೋ?

ಮು:—ಆಹುದು. ಈಗಲೇ ನೋಡಬೇಕು. ಇಲ್ಲದಿದ್ದರೆ ನನ್ನಿಂದ ತಡೆಯಲಾಗುವುದಿಲ್ಲ.

ಸಾ:—ಹಾಗಾದಲ್ಲಿ ನೋಡಿ! (ಎಂದು ತಾನು ಧರಿಸಿದ್ದ ಕೃತಕ ಗಡ್ಡ ಮೀಸೆಗಳನ್ನು ಕಿತ್ತುಹಾಕಿ-ಕಾವಿಶಾಠಿಯನ್ನು ಕಳಚಿಹಾಕಿ—ಪ್ರಭಾಕರನಾಗಿ ನಿಲ್ಲುವನು)

ಮು:—ಹಾಂ! ಪ್ರಭಾಕರ! ನೀನು! ಸಾಧು! ನಿಜವೆ? (ಎಂದು ಅಪ್ಪಿಕೊಳ್ಳುವನು)

ಪ್ರ:—ಅಹುದು; ನಿನ್ನಾಣೆಗೂ ನಾನು ಪ್ರಭಾಕರ.

ಮು:—ಪ್ರಭಾಕರ್! ನನ್ನ ಧೂರ್ತತನವನ್ನು ಮನ್ನಿಸು! ಪ್ರಭಾಕರ್! ನನ್ನ ಜೀವಿತ ಸರ್ವಸ್ವವೇ! ಪ್ರೇಮದ ಭಾಂಡಾರವೇ! ಆಪ್ತಸ್ನೇಹಿತನೆಂದರೆ ನೀನೇ ಅಲ್ಲವೆ?

ಪ್ರ:—ಮುಕುಂದ್! 'ಶಂಖದಲ್ಲಿ ಬಿದ್ದರೆ ತೀರ್ಥ!' ಅದಿರಲಿ. ಈಗ ಪ್ರಶಂಸೆಯು ಬೇಡ.

ಮು:—ಮಿತ್ರ! ಹಾಗಲ್ಲ. ನಿನ್ನಿಂದ ನನ್ನ ಸಂಸಾರವು ದುಃಖದಿಂದ ಪಾರಾಯಿತು. ನಿನ್ನ ನಿಷ್ಕಳಂಕ ಸೇವೆ ಸಹಾಯಗಳಿಂದ—ಸ್ವಾರ್ಥತ್ಯಾಗದಿಂದ—ಮೃತ್ಯುವಶರಾದ ನಾವೆಲ್ಲರೂ ಪ್ರಾಣದಾನವನ್ನು ಪಡೆದು ಕೃತಕೃತ್ಯರಾದೆವು. ಮಿತ್ರ ಮನ್ನಿಸು.

ಪ್ರ:—ಮುಕುಂದ! ನಿನ್ನೀ ವಂದನೆಗಳನ್ನು ಸಕಲ ಚರಾಚರಾತ್ಮಕನಾದ ಶ್ರೀ ಪಾಂಡುರಂಗ ಪರಮಾತ್ಮನಿಗೆ ಅರ್ಪಿಸು. ನನ್ನನ್ನೇಕೆ ಹೊಗಳುವೆ? ನಿರ್ಮಲ ಸ್ನೇಹದಲ್ಲಿ ಕಪಟವಿಲ್ಲ; ಜಾಲವಿಲ್ಲ; ಪ್ರತಿಫಲಾಪೇಕ್ಷೆಯಿಲ್ಲ. ಕಪಟರಹಿತವಾದ ಸ್ನೇಹವೇ — ಸೇವೆ ಸಹಾಯಗಳಿಂದ ಕೂಡಿದ ಸ್ನೇಹವೇ—ಪಾರಮಾರ್ಥಿಕವೆನಿಸುವುದು.

ಮು:— ||ಸುಳಾದಿ||

**ಅಚ್ಯುತಾನಂತ ಗೋವಿಂದ ರಕ್ಷಿಸೈ ಪುರು**
**ಷೋತ್ತಮ ಶ್ರೀಹರಿ ನಾರಾಯಣ**
**ಪ್ರದ್ಯುಮ್ನ ಸಂಕರ್ಷಣ ವಾಸುದೇವ ಅನಿ**
**ರುದ್ಧ ಪುರಂದರವಿಠಲರಾಯ ದೇವೋತ್ತಮ ||ರಕ್ಷಿಸೈ||**



ದೃಶ್ಯ ೧೮] [ಸ್ಥಾನ : ಬೀದಿ

(ಪ್ರವೇಶ : ನಾರಾಯಣ)

ನಾ:—(ಸ್ವಗತ) ಏನೋ ಏಳ್ತಾರೇ ಪರಪಂಚದಾಗೇ — "ಎಲ್ಲಾ ನಾ ಮಾಡಿದ್ದು-ನಾ ಮಾಡಿದ್ದು" ಅಂತ. ಪರಮಾತ್ಮ ಒಬ್ಬನನ್ನೇಂತ ನೆಂಬ್ಡಿದ್ರೆ ಎಂತೇ ಪರ್ಯೋಜನಾಂತ ? 'ಸಂಕಟ ಬಂದರೆ ಮಟ್ಟಿಗೆ ಎಂಕಟರಮಣಾ" ಅಂತಂದ್ರೆ ತೀರೋಯ್ತಾ ಲೆಕ್ಕ ? ಮೊಟ್ಟಮೊದಲಾಗೇ ನಮ್ಮೆಜಮಾನ್ರೂ ಅಂಗೇ ಅಂತಿದ್ರೂ. ಈಗ ಅವರ ಮನಾನೂ ಬದಲಾಯಿಸಿ ಓಗೈತೆ. ಒಟೇಟಲ್ಲ.

(ಪ್ರವೇಶ : ಪಾಂಡುರಂಗ)

ಪಾಂ:—ಯಾಕೋ ನಾರಾಯಣ ! ಇನ್ನೂ ಇಲ್ಲೇ ಇದ್ದೀಯಲ್ಲೋ ?

ನಾ:—ತಾವು ಬತ್ತೀರೇನೋಂತ ಕಾಯ್ಕೊಂಡಿದ್ದೆ ಬುದ್ಧಿ !

ಪಾಂ:—ಇನ್ನು ನಡಿಯೋ ಹೊತ್ತಾಯ್ತು.

ನಾ:—ಅಂಗೇ ಆಗಲಿ ಬುದ್ಧಿ !

(ಇಬ್ಬರೂ ಹೊರಡುವರು—ಅಷ್ಟರಲ್ಲಿ)

ಪಾಂ:—ಅಲ್ಲವೋ ನಾರಾಯಣ !

ನಾ:—ಬುದ್ಧಿ !

ಪಾಂ:—ಅಂತೂ ದೇವರಿಚ್ಛೆ ಹೀಗೇಂತಲೇ ಹೇಳೋಕಾಗುತ್ತೆಯೇನೋ ?

ನಾ:—ಯಾರ ಕೈಲಾದಾತು ಬುದ್ಧಿ ? ಯಾರೂ ಏಳಾಂಗಿಲ್ಲ.

ಪಾಂ:—ಅಲ್ಲ, ಆ ಹುಡುಗಿ ಲಲಿತೆ ! ಚಿಕ್ಕವಳಾದ್ರೂ ಬಹು ಜಾಣೆ ! ಬಹು ಜಾಣೆ !

ನಾ:—ಅಲ್ಲವ್ರಾ ಬುದ್ಧಿ !

ಪಾಂ:—ಅಲ್ಲ, ಅವಳ ಮಾತು ! ಹಾಂ ! ಅವತ್ತೊಂದು ಕ್ಷಣದಲ್ಲಿ ನನ್ನ ಮನಸ್ಸನ್ನೇ ಮಾರಿಸಿಬಿಡ್ತಲ್ಲಾ !

ನಾ:—ಆ ಕತೇ ಕೇಳಿತ್ತಿದ್ದೀರ್ಯಾ ಬುದ್ಧಿ ? ಎಂತೇವ್ರನ್ನೂ ನಡುಗಿಸಿ ಬಿಡೋದು ಅವರಾಡಿದ ಒಂದೊಂದು ಮಾತೂ !

ಪಾಂ:—ಅಲ್ಲ, ಅವಳ ದೈವಭಕ್ತಿಯೋ !

ನಾ:—ಅದ್ನಿಂಗೇಂತ ಒಗಳಾಕಾಯ್ತುದಾ ಬುದ್ಧಿ ?

ಪಾಂ:—ಅಲ್ಲವೋ ನಾರಾಯಣ ! ಅಷ್ಟೊಂದು ನಿರ್ಧರವಾಗಿತ್ತು ಆ ಮದುವೇ !

ನಾ:—ಮದುವೇ ಆಗೋಯ್ತೂಂತಲೇ ಅಂದುಕೊಂಡಿದ್ದೆ ಬುದ್ಧಿ ನಾನು.

ಪಾಂ:—ಕೊನೇಗೇ, ಲಲಿತೇ ನಮ್ಮನೇಗೆ ಬಂದಾಗಲೂ ಕೂಡ ಇನ್ನೇನು ಮದುವೇ ನಿಶ್ಚಯವಾದ ಹಾಗೆಯೇಂತಿದ್ದೆ ನೋಡು.

ನಾ:—ಅಲ್ಲವ್ರಾ ಬುದ್ಧಿ ? ನಂಗೂ ಅಂಗೇ ಅನ್ನಿಸ್ತೂಂತಂದ್ನೆಲ್ಲಾ ಬುದ್ಧಿ ! ಅದಿರಲಿ. ನೆನ್ನೆ ಆಗೂಬೇಕೂಂತಿದ್ದ ಉಡುಗೀನ್ನ 'ಪಾಂಡುರಂಗ ದೇವರ ಸಾಕ್ಸಿಯಾಗಿ ನನ್ನ ಮಗಳೂ'ಂತ ತಮ್ಮ ಮಾತು ಒಂಟ್ಬುಡ್ತಲ್ಲಾ ?

ಪಾಂ:—ದೇವರಾಡಿಸಿದ್ನೋ ಆ ಮಾತನ್ನ ! ದೇವರಿದ್ದಾನೋ ನಾರಾಯಣ ! ಆಗೋ ಮದುವೇ ತಪ್ಪಿ ಹೋದ್ದಕ್ಕೆ ದೇವರೇ ಸಾಕ್ಷಿಯಲ್ಲವೇನೋ ? ದೇವರಿದ್ದಾನೇಂತ ನಂಬೋ ಕರ್ಮಿಷ್ಠ ಮುಂಡೇದೇ !

ನಾ:—ಇದ್ಯಾಕಾ ಬುದ್ಧಿ ! ನಾನಾ ಇಲ್ಲಾಂದೋನು ? ದೇವರವ್ನೇ ಅವ್ನೇಂತಲ್ಲವ್ರಾ ತಮ್ಕೂಟ ನಾನೇಳ್ತಿದ್ದಿದ್ದು ? ಇಲ್ಲಾ ಇಲ್ಲಾಂತ ತಾವೇ ಅಲ್ಲವ್ರಾ ಅಪ್ಪಣೆಕೊಡಿಸಿದ್ದು ?

ಪಾಂ:—ಹಾಂ ! ಏನಂದೆ ?

ನಾ:—ದೇವರವ್ನೆ ಬುದ್ಧಿ !

ಪಾಂ:—ದೇವರಿದ್ದಾನೇ ನಂಬೋ—ಸುಮ್ಮನೆ ಹರಟಬೇಡವೋ !

ನಾ:— ಅಂಗೇ ಆಗ್ಲಿ ನಡೀರಿ ಬುದ್ಧಿ !



ದೃಶ್ಯ ೧೯] [ಸ್ಥಾನ: ಬೀದಿ

(ಪ್ರವೇಶ : ಮುಕುಂದ)

ಮು:—(ಸ್ವಗತ)

ತ್ವಮೇವ ಮಾತಾಚ ಪಿತಾತ್ವಮೇವ ।
ತ್ವಮೇವ ಬಂಧುಶ್ಚ ಸಖಾತ್ವಮೇವ ॥
ತ್ವಮೇವ ವಿದ್ಯಾ ದ್ರವಿಣಂ ತ್ವಮೇವ ।
ತ್ವಮೇವ ಸರ್ವಂ ಮಮ ದೇವ ದೇವ ॥

ನಿತ್ಯಾನಂದಂ ಪರಮಸುಖದಂ ಕೇವಲಂ ಜ್ಞಾನಮೂರ್ತಿಂ ।
ವಿಶ್ವಾತೀತಂ, ಗಗನ ಸದೃಶಂ ತತ್ವಮಸ್ಯಾದಿ ಲಕ್ಷ್ಯಂ ॥
ಏಕಂ ನಿತ್ಯಂ ವಿಮಲಮಚಲಂ ಸರ್ವದಾ ಸಾಕ್ಷಿಭೂತಂ ।
ಭಾವತೀತಂ ತ್ರಿಗುಣರಹಿತಂ ಸದ್ಗುರುಂ ತ್ವಂ ನಮಾಮಿ ॥

ಹೇ ! ಅಪಾರ ಮಹಿಮನೆ ! ನಿನ್ನ ಮಾಯೆಯು ಅತಿ ವಿಚಿತ್ರವಾದುದು. ಸ್ಥಾನಮಾನಗಳು, ಲಾಭಾಲಾಭಗಳು, ಜಯಾಪಜಯಗಳು, ಎಲ್ಲವೂ ನಿನ್ನ ಕೈವಶವೇ ! ನಿನ್ನ ದಯವೊಂದಿದ್ದರೆ ಮಾನವನಿಗಾವ ಕೊರತೆಯುಂಟು ? ನಿನ್ನ ಸಂಕಲ್ಪವನ್ನು ಕೂಲಂಕಷವಾಗಿ ಅರಿತವರಾರು ? ಎರಡಾವರ್ತಿ ನಾನು ಮರಣೋನ್ಮುಖನಾದೆ. ಆದರೆ ಆತ್ಮಹತ್ಯೆ, ಸ್ವಜನರ ಸಂಹಾರ, ಇವು ತಪ್ಪಿ, ಇಂದು ಮಾನವ ಕೂಟದಲ್ಲಿ ಕಲೆತು—ಮುಕುಂದನು ನಿನ್ನನ್ನು ಪ್ರಾರ್ಥಿಸುತ್ತಿರುವನೆಂದರೆ—ಆ ಲಭ್ಯವು ನನಗೆ ದೊರೆತುದು — ಆದ್ಯಂತ ನಿನ್ನ ದಿವ್ಯಲೀಲೆಯ ಮಹಿಮೆಯಿಂದಲೇ ! ನಾಳೆ ಬುಧವಾರ ಲಲಿತಾ ಮನೋಹರರ ವಿವಾಹ ! ಹೇ ದೇವ ! ಈ ಸಂತೋಷಕಾರ್ಯವನ್ನು ಸಾಂಗೋಪಾಂಗವಾಗಿ ನೆರವೇರಿಸುವ ಭಾರವು ನಿನ್ನನ್ನೇ ಸೇರಿದುದು. ಸಕಲ ಜೀವ ಜಡಾತ್ಮಕ ಜಗತ್ತಿನೊಳಗಿದ್ದು - ಅಕಳಂಕನಾಮರೂಪದಲ್ಲಿ ಕರೆಸಿಕೊಂಡು-ಪ್ರಕಟನಾಗದೆಯೇ - ಸಕಲ ತೆರನಾದ - ಸುಖ ದುಃಖರೂಪಾತ್ಮಕವಾದ - ವ್ಯಾಪಾರಗಳನ್ನೂ ಮಾನವಕೋಟಿಯಿಂದ ಮಾಡಿಸಿ, ಅವರವರ ಪೂರ್ವಾರ್ಜಿತ ಕರ್ಮಗಳನ್ನನುಸರಿಸಿ - ಫಲಗಳನ್ನು ಬೀರುವ - ನಿನ್ನ ದಿವ್ಯಲೀಲೆಯನ್ನೂ, ಅದ್ಭುತ ಸಂಕಲ್ಪವನ್ನೂ ನಾನು ಮೊದಲೇ ಅರಿಯದವನಾದೆ. ಹೂಂ ! ವಿಧಿಯನ್ನು ಉಲ್ಲಂಘಿಸಿ ಬಾಳಿದವರಾರು ?

ಹರಿಣಾಪಿ, ಹರೇಣಾಪಿ, ಬ್ರಹ್ಮಣಾಪಿ ಸುರೈರಪಿ ।
ಲಲಾಟ ಲಿಖಿತಾ ರೇಖಾ ಪರಿಮಾಷ್ಟುರ್ನಶಕ್ಯತೇ ॥

(ಹೊರಡಲನುವಾಗುವನು ..........ಅಷ್ಟರಲ್ಲಿ ಧರಣಯ್ಯನು ಪ್ರವೇಶಿಸಿ)

ಧ:—ನಮಸ್ಕಾರ ಸ್ವಾಮಿ, ಮುಕುಂದರಾಯರೆ ! ಕ್ಷೇಮವೆ ?

ಮು:—ಏನೋ ಹೀಗೇ ನೋಡಿ ನಿಮ್ಮ ದಯದಿಂದ ! ಅದಿರಲಿ, ಸ್ವಾಮಿ ಧರಣಯ್ಯನವರೆ ! ತಮ್ಮ ಬಾಕಿ, ಬಡ್ಡಿ, ಎಲ್ಲಾ ಅವತ್ತೇ ಕಳುಹಿಸಿ ಬಿಟ್ಟೆನಲ್ಲಾ ! ಮತ್ತೇನು ?

ಧ:—ಅದಕ್ಕಲ್ಲಾಂದ್ರೆ ! ಛೇ ! ಅದಕ್ಕಲ್ಲಾ ಸ್ವಾಮಿ! ಅದಕ್ಕಲ್ಲ. ಬಾಕಿ ಬಂತು ಸ್ವಾಮಿ !

ಮು:—ಹಾಗಾದರೆ ಬಡ್ಡಿ ಏನಾದ್ರೂ ನಿಂತಿದೆಯೋ ಏನೋ ? ಇದ್ರೆ ಹೇಳಿ; ಅದನ್ನೂ ಕಳುಹಿಸಿ ಕೊಡ್ತೀನಿ. ನಡುಬೀದೀಲಿ ಮಟ್ಟಗೆ ಮಾನಾ ಕಳೀಬೇಡಿ.

ಧ:—ಅಲ್ಲಾ ಸ್ವಾಮಿ ! ಇದ್ಯಾಕೆ ಸ್ವಾಮಿ! ಹೀಗೆ ಗಾಬರಿ ?

ಮು:—ಏನೋ ನೋಡಿ ಧರಣಯ್ಯನವರೇ ! ನಿಮ್ಮನ್ನ ನೋಡಿದೇಟಿಗೆ ನನ್ನ ಎದೆ ಹೊಡಕೊಳ್ಳುತ್ತೆ.

ಧ:—ನೋಡಿದಿರಾ ! ನಾನೇನಂಥಾ ಕೆಟ್ಟವನೇ ಸ್ವಾಮಿ ? ಏನೋ ಸಮಯಕ್ಕೆ ಹಣಾ ಒದಗಲಿಲ್ಲಾಂತ ಸ್ವಲ್ಪ ವರಾತು ಮಾಡಿದೆ ; ಮನ್ನಿಸಿ ಸ್ವಾಮಿ ! ಹಾಳು ಹಣ ಅನ್ನೋದು ಬಹು ಕೆಟ್ಟದ್ದು ನೋಡಿ. ಎಂಥಾ ಮಿತ್ರರನ್ನೂ ಶತ್ರುಗಳಂತೆ ಮಾಡಿಬಿಡುತ್ತೆ.

ಮು:—ಸ್ವಾಮಿ ! ಧರಣಯ್ಯನವರೆ ! ನಾನೇನು ಮನ್ನಿಸೋದು ಹೇಳಿ ? ಮೇಲೊಬ್ಬನಿಲ್ಲವೆ ? ಎಲ್ಲಾರ ಕೃತ್ಯಗಳನ್ನೂ ಕಾಯ್ತಾ ಇದ್ದಾನಲ್ಲಾ ! ಅವನೇ ಮನ್ನಿಸಬೇಕು.

ಧ:—ಸ್ವಾಮಿ ! ತಾವು ಆ ರೀತಿ ಭಾವಿಸಬಾರದು. ಎಲ್ಲಾ ಕರ್ಮ ನೋಡಿ. ಅದಿರಲಿ. ತಮಗೆ ಮತ್ತೆ ಅದೇ ಉದ್ಯೋಗ ದೊರೀತಂತೆ. ಬಹಳ ಸಂತೋಷ ನೋಡಿ - ಬಹಳ ಸಂತೋಷ ! ನೀವೆಲ್ಲಾ ನಮಗೆ ಬೇಕಾದವ್ರು ಸ್ವಾಮಿ ! ನೀವು ಚೆನ್ನಾಗಿ ಬಾಳಿದ್ರೆ ನನಗೆ ಅದೇ ಒಂದು

ಆನಂದ! ತಮ್ಮ ಮಗಳ ಮದುವೇನೂ ನಿಶ್ಚಯವಾಯಿತೂಂತ ಕೇಳಿದೆ. ಹೋಗಲಿ ಬಿಡಿ. ಡಾಕ್ಟರ್ ಮನೋಹರ್‌ರವರೂ ಚಿನ್ನದಂಥಾ ಮನುಷ್ಯರು. ಒಳ್ಳೆ ಸಂಬಂಧ. ಅಂದ ಹಾಗೆ—ಈಗ ಸಾಮಾನೆಲ್ಲಾ ತಾವೆಲ್ಲಿ ತಕ್ಕೊಳ್ಳೋಣಾಗುತ್ತೋ? ಎಲ್ಲಾ ನಮ್ಮಲ್ಲೇ ಇವೆಯಲ್ಲಾ! ಅಪ್ಪಣೆಯಾದ್ರೆ ಮದುವೆಗೆ ಬೇಕಾದ ಸಾಮಾನೆಲ್ಲಾ - ಕಳಿಸಿಕೊಡ್ತೇನೆ. ಹಣಕ್ಕೇನೂ ತಗಾದೆ ಇಲ್ಲ ಅನ್ನಿ. ಎಲ್ಲಿ ಹೋಗುತ್ತೆ? ಸ್ವಲ್ಪ ಹಿಂದು ಮುಂದಾಗಿ ತಕ್ಕೊಂಡರಾಯ್ತು.

ಮು:—ಧರಣಯ್ಯನವರೇ! ಕ್ಷಮಿಸಿ. ನನ್ನದೊಂದು ವಿಜ್ಞಾಪನೆ. ನಾನೂ ಎಷ್ಟೋ ಕಷ್ಟಗಳು ಅನುಭವಿಸಿ ಬಿಟ್ಟೆ. ಇನ್ನು ಮೇಲೆ ಸಾಲಮಾಡ ಕೂಡದೂಂತ ನಿರ್ಧರಮಾಡಿಬಿಟ್ಟಿದ್ದೇನೆ. ತಮ್ಮಲ್ಲೇ ಸಾಮಾನು ತಕ್ಕೊಳ್ಳೋಕ್ಕೇನೂ ಆಕ್ಷೇಪಣೆಯಿಲ್ಲ. ಆದರೆ ದುಡ್ಡು ಕೊಟ್ಟು ಕಳಿಸಿ ತರಿಸಿಕೊಳ್ತೇನೆ.

ಧ:—ಏನೋ ವಿಶ್ವಾಸವಿರಬೇಕು ಅಂತೂ. ಯಜಮಾನರ ಕಾಲದಿಂದ ಬಂದ ವಾಡಿಕೆ ನಿಮ್ಮನೇದೂ. ಈಗ ತಪ್ಪಿಹೋಗಕೂಡದು. ಹಾಗೇ ನಡಕೊಂಡು ಬರಬೇಕೂಂತ! ತೊಂದರೆ ಕೊಟ್ಟೆ. ಎಲ್ಲೋ ಅವಸರವಾಗಿ ದಯಮಾಡಿಸ್ತಾ ಇದ್ರಿ. ಕ್ಷಮಿಸಬೇಕು.

ಮು:—ಬಹಳ ಸಂತೋಷ - ಧರಣಯ್ಯನವರೇ!

(ಧರಣಯ್ಯನು ಹೊರಡುವನು.)

(ಸ್ವಗತ) ಎಲ್ಲಾ ವೇಷಧಾರೀ ಜನಗಳು! ಹಣವಿದ್ದರೆ ಹತ್ತರ ಸೇರೋದು. ಇಲ್ಲದಿದ್ದರೆ ಹತ್ತುಗಾವುದ ಆಚೆ ನಡಿಯೋದು.



**ದೃಶ್ಯ : ೨೦]** **[ಸ್ಥಾನ : ವಿವಾಹ ಮಂಟಪ.**

ಪಾತ್ರಗಳು : ಲಲಿತಾ ಮನೋಹರ್

**(ಶ್ರೀಧರ, ಅನಂತ್, ಪ್ರಭಾಕರ್, ಮುಕುಂದ್, ಸೀತಾ, ಪುರೋಹಿತರು ಇತ್ಯಾದಿ)**

ಶ್ರೀ:—ಅನಂತು ! ಅಂತು ಮುಕುಂದನ ಕಷ್ಟ ಒಂದು ಬಗೆಯಾಗಿ ಕೊನೆಗಂಡಂತಾಯಿತಲ್ಲವೆ ?

ಅ:—ಅಣ್ಣಾ ! ಎಲ್ಲಾ ಭಗವಂತನ ಅನುಗ್ರಹ! ಇದರಲ್ಲಿ ನನಗೊಂದು ವಿಷಯ ತೋರುತ್ತಣ್ಣಾ ! ತೀರ ಕಷ್ಟಕ್ಕೊಳಗಾದವರ ಜೀವನ ಚರಿತ್ರೆ ಇತರರನ್ನು ತಕ್ಕಮಟ್ಟಿಗೆ ಎಚ್ಚರಿಸುತ್ತೆ ಅಲ್ಲವೆ ?

ಶ್ರೀ:—ಅಹುದಹುದು !

ಪ್ರ:—(ಪ್ರವೇಶಿಸಿ - ಪುರೋಹಿತನನ್ನು ಕುರಿತು) ಏಕೆ ಪುರೋಹಿತರೆ ! ಧಾರೆಗೆ ಹೊತ್ತಾಗಲಿಲ್ಲವೆ ?

**(ಪ್ರವೇಶ : ಮುಕುಂದ್ ಮತ್ತು ಸೀತಾ)**

ಪು:—(ಮುಕುಂದನನ್ನು ನೋಡಿ) ಧಾರಾಮಹೋತ್ಸವ ನಡೀಬಹುದಷ್ಟೆ ?

ಮು:—(ಶ್ರೀಧರನನ್ನು ನೋಡಿ) ಏನಣ್ಣಾ ?

ಶ್ರೀ:—ಆಹಾ ! ಆಗಲಪ್ಪಾ !

ಪು:—ಓಂ ! ಸುಲಗ್ನಾ, ಸಾವಧಾನಾ, ಸುಮುಹೂರ್ತಾ, ಸಾವಧಾನಾ, ಲಕ್ಷ್ಮೀನಾರಾಯಣ ಧ್ಯಾನಾ, ಸಾವಧಾನಾ........ ...

(ಧಾರೆ ಮತ್ತು ಆರತಿ)

ವಾಮನ ವಾಸುದೇವ ಪದುಮನಾಭ ಹರಿ ।
ದಾಮೋದರ ನರಹರಿ ಮಾಧವ ಸಿರಿಧರ ॥
ನಾರಾಯಣ ಹರಿ ಸಿರಿ ವತ್ಸಾಂಕಿತ ।
ವಾರಿಜದಳ ಲೋಚನ ಭೂರಮಣ ॥

ಜಯ ಜಯ ಸಿರಿ ನಾರಸಿಂಹ ದುರಿತ ಭಯನಿವಾರಣ ।
ಜಯ ಜಯ ಸಿರಿ ದಿವ್ಯಸಿಂಹ ಪುರಂದರ ವಿಟ್ಠಲ ದೇವ ॥

**॥ ಮಂಗಳಂ ॥**



# ಹಲವು ಅಭಿಪ್ರಾಯಗಳು

## ಲೋಭಿ ಅಥವಾ ಕಾರ್ಪಣ್ಯ

ಇದೊಂದು ನೂತನ ಸಾಮಾಜಿಕ ನಾಟಕ. ಶ್ರೀ|| ಬಿ. ಎಸ್. ರಾಮಸ್ವಾಮಿ ಅಯ್ಯಂಗಾರ್, ಬಿ. ಎ., ರವರಿಂದ ರಚಿತವಾಗಿದೆ. ಬೆಲೆ ಎಂಟಾಣೆ ಮಾತ್ರ. ಈ ಗ್ರಂಥವನ್ನು ನಾವು ವಂದನಾಪೂರ್ವಕವಾಗಿ ಆದರದಿಂದ ಸ್ವೀಕರಿಸಿರುತ್ತೇವೆ. ಕನ್ನಡದಲ್ಲಿ ಸಾಮಾಜಿಕ ನಾಟಕಗಳ ರಚನೆಯು ಸಾಹಿತ್ಯದಲ್ಲಿ ಹೊಸತರಹದ ಸಾಹಸವಾಗಿರುತ್ತದೆ. ರಂಗಭೂಮಿಯ ಪ್ರದರ್ಶನಗಳಿಂದ ಸಮಾಜ ಸುಧಾರಣೆಯೂ ಒಂದು ಮಹಾ ಉದ್ದೇಶವಾಗಿರುವುದರಿಂದ ಕನ್ನಡ ಓದುಗರು ಮತ್ತು ನಾಟಕ ಮಂಡಲಿಯವರು ಈ ಪುಸ್ತಕಕ್ಕೆ ಉತ್ತೇಜನವನ್ನೂ ಪ್ರೋತ್ಸಾಹವನ್ನೂ ಕೊಡಬೇಕೆಂದು ಆಶಿಸುತ್ತೇವೆ.

"ಒಕ್ಕಲಿಗರ ಪತ್ರಿಕೆ"
3—2—1938.

## ಸ್ವಾಮಿ, ವಿಶ್ವಾಸಪಾತ್ರರಾದ ಸನ್ಮಿತ್ರರೇ!

ತಮ್ಮಿಂದ ಬರೆಯಲ್ಪಟ್ಟ "ಲೋಭಿ" ಅಥವಾ "ಕಾರ್ಪಣ್ಯ"ವೆನ್ನುವ ಹೊತ್ತಗೆಯು (ಪುಸ್ತಕವು) ನನ್ನ ಕೈಸೇರಿತು. ಒಂದೆರಡು ಹಾಳೆಗಳನ್ನು ತಿರುವುತ್ತಿರುವಂತೆಯೇ ತಮ್ಮ ಭಾಷಾಶೈಲಿಯೂ, ಗಂಭೀರ ಗಭೀರತೆಗಳಿಂದೊಡಗೊಂಡ ಸಮಾಜ ಸಂಸ್ಕರಣ ರೂಪವಾದ ತಮ್ಮ ಸಂಕಲ್ಪವೂ, ಉತ್ಸಾಹಪೂರಿತವೂ ಸಮಯೋಚಿತವೂ ಆದ ತಮ್ಮ ಪಾತ್ರ ಕಲ್ಪನಾ ಪೋಷಣೆಗಳೂ, ತಮ್ಮ ಪುಸ್ತಕವನ್ನು ಓದಿ ಮುಗಿಸಲೇಬೇಕೆಂದು ತಮ್ಮ ಭಾವನಾಪ್ರಪಂಚದಲ್ಲಿ ಪೊಳಸುಗ್ಗಿಸಿ ಒತ್ತಾಯಪಡಿಸಿದುವು. ಕನ್ನಡನುಡಿಯ ಹೊತ್ತಗೆ ಎಂದರೆ ಬಹುವಾದ ತಿರಸ್ಕಾರಭಾವನೆಯಿಂದ ಕೈಯ್ಯಲ್ಲೂ ಸೋಕದಿರುವ ನನ್ನನ್ನು ಓದಿ ಮುಗಿಸುವಂತೆ ಬಲಾತ್ಕಾರಪಡಿಸಿದುದನ್ನು ಕುರಿತು ಯೋಚಿಸುವಾಗ ಈ ಪುಟ್ಟ ಹೊತ್ತಗೆಯು ಲೋಕಾದರಣೀಯವಾಗುತ್ತದೆಂದೂ ತಮ್ಮ ಹೃತ್ಪೂರ್ವಕವಾದ ಭಾಷಾಭಿಮಾನ, ಸಮಾಜ ಸೇವೆಗಳು ಸ್ವಸ್ವರೂಪಧಾರಣಮಾಡಿ, ತಮ್ಮ ಶ್ರಮ ವ್ಯಯಗಳು ಸಾರ್ಥಕವಾದೀತೆಂದು ನನ್ನ ನಂಬಿಕೆಯು. ನನ್ನಂತೆಯೆ ಕನ್ನಡ ನುಡಿಯ ಹೊತ್ತಗೆಯೆಂದರೆ ಅಗೌರವದಿಂದ ಕಾಣುತ್ತಿರುವ ನಾಡಿನ ಸೋದರ ಜಾಲವು ತಮಗೆ ಸೋದರರಾಗಿ ಮುಂದುವರಿಯುತ್ತ ಬಂದು ಎಣಿಕೆಗೆ ಅಳವಿಲ್ಲದ ಸಹಾಯಕರಾದಾರೆಂಬ ಆಶೆಯುಳ್ಳವನಾಗಿದ್ದೇನೆ. ಮುಂದೆಯೂ ಇಂತಹ ಹೊತ್ತಗೆಗಳನ್ನು ಹೊರೆ ಹೊರೆಯಾಗಿ ಹೊರಗೆಡಹುತ್ತಾ ದೇಶ ಸೇವೆ ಭಾಷಾಸೇವೆಗಳಲ್ಲಿ ಬದ್ಧಾದರರಾಗಿ ಭಗವತ್ಕೃಪೆಗೆ ಪಾತ್ರರಾಗಲೆಂದು ಪ್ರಾರ್ಥಿಸುವ

ತಮ್ಮ ಚರಣಸೇವಕ ಭಾರತಿ ಸಂಪಂಗಿರಾಮಯ್ಯ,
2—2—1938. ಸಂಪಾದಕ, "ಸವಿನುಡಿ" ಕೋಟೆ ಬೆಂಗಳೂರು.

# ವಿಧಿ ಅಥವಾ ಮದೋನ್ಮತ್ತ ಜಗದೀಶ್

---

"ಇದೊಂದು ನೂತನ ಸಾಮಾಜಿಕ ನಾಟಕ. ಕನ್ನಡವಾಚಕ ವೃಂದಕ್ಕೆ ಈಗಾಗಲೇ ಪರಿಚಿತರಾಗಿರುವ ಶ್ರೀ|| ಪಿ. ಎಸ್. ರಾಮಸ್ವಾಮಿ ಅಯ್ಯಂಗಾರ್, ಬಿ.ಎ., ರವರು ಈ ಗ್ರಂಥವನ್ನು ರಚಿಸಿರುತ್ತಾರೆ.

ಕನ್ನಡ ಸಾಹಿತ್ಯದಲ್ಲಿ ಈಚೆಗೆ ಗದ್ಯನಾಟಕಗಳು ಹೊರಬೀಳುತ್ತಿರುವುದು ಸಾಹಿತ್ಯದಲ್ಲಿ ಒಂದು ಹೊಸ ಮಾರ್ಗ. ಪಾಶ್ಚಾತ್ಯ ಸಾಹಿತ್ಯದ ಪ್ರಭಾವವು ನಮ್ಮ ಕನ್ನಡ ಸಾಹಿತ್ಯದಮೇಲೆಯೂ ಪರಿಣಾಮಕಾರಿಯಾಗುತ್ತಲಿದೆ. ನಮ್ಮ ಸಾಹಿತ್ಯದಲ್ಲಿ ನವಚೈತನ್ಯವೊಂದು ಹರಿಯಲಾರಂಭಿಸಿದೆ. ಇದರಿಂದ ಕನ್ನಡ ಸಾಹಿತ್ಯವು ಅಭಿವೃದ್ಧಿಗೊಂಡು ನಾಡಿಗೆ ಕೀರ್ತಿದಾಯಕವಾಗುವುದು. ಈ ಕಾರ್ಯದಲ್ಲಿ ಕಿಂಚಿತ್ತಾದರೂ ಸೇವೆಮಾಡುತ್ತಿರುವ ಗ್ರಂಥಕರ್ತರಾದ ಶ್ರೀ|| ರಾಮಸ್ವಾಮಿ ಅಯ್ಯಂಗಾರ್ಯರನ್ನು ನಾವು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ. ಅವರು ಈಗಾಗಲೇ ಲೋಭಿ, ನವೀನಸಮಾಜ, ಗ್ರಹಚಾರ, ವಂಚನೆ ಎಂಬ ಸಾಮಾಜಿಕ ನಾಟಕಗಳನ್ನು ರಚಿಸಿರುತ್ತಾರೆ.

ವಿಧಿ ಅಥವಾ ಮದೋನ್ಮತ್ತ ಜಗದೀಶ್ ಎಂಬ ಸಾಮಾಜಿಕ ನಾಟಕವು ಆಧುನಿಕ ನವೀನ ಭಾರತದ ಜನಜೀವನ ಸಾಮಾಜಿಕ ಚಿತ್ರವೊಂದನ್ನು ಚಿತ್ರಿಸುತ್ತದೆ. ಗ್ರಂಥದಲ್ಲಿ ಸಾಹಿತ್ಯ ಕಲೆಗೆ ಆವಶ್ಯಕವಾದ ಶೈಲಿ, ಪಾತ್ರಗಳು, ವಿಷಯ ಐಕ್ಯತೆ, ಉದ್ದೇಶ, ನೈತಿಕ ಧ್ಯೇಯಗಳು ಸಮರಸವಾಗಿವೆ. ಈ ಸಾಮಾಜಿಕ ನಾಟಕವನ್ನು ಓದಲು ಆರಂಭಿಸಿದರೆ ಮುಗಿಸಿಯೇಬಿಡಬೇಕೆಂಬ ಆತುರವು ಪ್ರಬಲವಾಗುತ್ತದೆ. ಪ್ರಕೃತ ನಮ್ಮ ಸಮಾಜ ಜೀವನದಲ್ಲಿ ಹಣಸಂಪಾದನೆಗೂ, ಅದರಮೇಲೆ ಹೊಂದಿಕೊಂಡಿರುವ ಸ್ವಾರ್ಥಸುಖಸಾಧನೆಗೂ, ಒಂದು ತರಹದ ದುಷ್ಟ ಪ್ರಾಮುಖ್ಯತೆಯು ಕೊಡಲ್ಪಟ್ಟಿದೆ. ಇದು ತೊಲಗಬೇಕು.

ಬಡವನೆಂಬುದು ಪಾಪಕರವಲ್ಲ. ಧನಿಕರ ಸಂಪತ್ತು ಬಡವರ ಉದ್ಧಾರಕ್ಕಾಗಿಯೇ ಬೆಳೆಯಬೇಕು. ಪಾಪಪೂರಿತವಾದ ಮಾರ್ಗಗಳಿಂದ ಕೂಡಿದ ಸಂಪತ್ತು ಹೇಗೆ ಬರುತ್ತದೆಯೋ, ಹಾಗೆಯೇ ಮಾಯವಾಗುತ್ತದೆ ಎಂಬಂಶವು ಈ ಗ್ರಂಥದಿಂದ ವ್ಯಕ್ತವಾಗುತ್ತದೆ. ಕನ್ನಡ ನಾಡಿನ ನಾಟಕ ಮಂಡಲಿಯವರೂ, ವಾಕ್ಚಲನ ಚಿತ್ರ ನಿರ್ಮಾಣಕರೂ, ಈ ಗ್ರಂಥವನ್ನು ಅವಲೋಕಿಸಿ, ಸಮಾಜ ಸೇವೆಗೆ ಸಿದ್ಧಗೊಳಿಸಲು ಅನುಕೂಲವಾಗಿರುತ್ತದೆ. ಗ್ರಂಥಕರ್ತರಿಗೆ ಸರ್ವರೀತಿಯಲ್ಲಿಯೂ ಪ್ರೋತ್ಸಾಹ ದೊರೆಯಲೆಂದು ಆಶಿಸುತ್ತೇವೆ".

ಒಕ್ಕಲಿಗರ ಪತ್ರಿಕೆ, ಬೆಂಗಳೂರು, 2—3—38.

# ಲೋಭಿ ಮತ್ತು ವಿಧಿ ಅಥವಾ ಮದೋನ್ಮತ್ತ ಜಗದೀಶ್:—

## (ಸಾಮಾಜಿಕ ನಾಟಕಗಳು)

---

ಶ್ರೀ ರಾಮಸ್ವಾಮಿ ಐಯ್ಯಂಗಾರ್ಯರು ಜನಾಂಗದ ಹೃದಯವನ್ನು ವಿಶೇಷವಾಗಿ ವ್ಯಾಪಿಸಿ, ಆಂದೋಳನಗೊಳಿಸುತ್ತಿರುವ ಹಲವು ಸಾಮಾಜಿಕ ಪ್ರಶ್ನೆಗಳನ್ನು ನವೀನ ರೀತಿಯ ಸಾಮಾಜಿಕ ನಾಟಕಗಳ ರೂಪದಲ್ಲಿ ಚಿತ್ರಿಸಿಕೊಡಲು ಸಂಕಲ್ಪಿಸಿ, ಈಗಾಗಲೇ ಎರಡುಮೂರು ನಾಟಕಗಳನ್ನು ಹೊರಗೆಡಹಿ ಕೃತಕೃತ್ಯರಾಗಿದ್ದಾರೆ. ಇವರ ನಾಟಕಗಳು ಕೇವಲ ರಂಗಭೂಮಿಗೆ ಮಾತ್ರವಲ್ಲದೆ, ಚಲಚ್ಚಿತ್ರಗಳಿಗೂ - ಸಾಮಾನ್ಯ ವಾಚನಕ್ಕೂ ಉಪಯುಕ್ತವಾಗುವಂತಿವೆ. ಮರ್ಮಸ್ಪರ್ಶಿಯಾದ ಮಾತುಗಳು, ಚಿಕ್ಕಚಿಕ್ಕ ವಾಕ್ಯಗಳು, ನಿತ್ಯಜೀವನಕ್ಕೆ ಲೇಶಮಾತ್ರವೂ ಮೀರಿರದ ವಿಷಯ ವಿವರಣೆ, ಸರ್ವಸಾಮಾನ್ಯ ಬಳಕೆಯ ಸಂಭಾಷಣೆ, ಇವು ಇವರ ಶೈಲಿಯ ವೈಶಿಷ್ಟ್ಯವೆನ್ನಬಹುದು. ಈ ನಾಟಕಗಳ ರಚನೆಯಲ್ಲಿ ಇವರಿಗಿರುವ ಧ್ಯೇಯಗಳೂ ಬಹು ಉದಾತ್ತವಾಗಿವೆ. "ಹಣವು ಅಸ್ಥಿರ. ಧನಮದವು ಆತ್ಮನಾಶಕ. ನಾಸ್ತಿಕತ್ವವು ನಯವಲ್ಲ. ಬಡತನವು ಪಾಪಕರವಲ್ಲ. ಬಡವರೆಂದರೆ ಬೇಡವಾದವರಲ್ಲ. ಅಸ್ಪೃಶ್ಯತೆಯು ಆಸ್ತಿಕವಲ್ಲ. ಕುಟುಂಬಕ್ಷೇಮವು ಕುರುಡು ಕವಡೆಯಲ್ಲ. ಮದುವೆಯೆಂದರೆ ನಿಸ್ಪೃಹವಾದ ಸಹಜೀವನ. ಮನಸ್ಸಾಕ್ಷಿಯನ್ನು ಅನುಸರಿಸಿ ನಡೆದರೆ ಮಾನವ ಜೀವನದಲ್ಲಿ ಕ್ಷೇಮವುಂಟು. ನಿಸ್ಕಲ್ಮಷ ಪಶ್ಚಾತ್ತಾಪದಿಂದ ಪಾಪಕ್ಕೆ ಪರಿಹಾರವುಂಟು. ಪರಮಾತ್ಮನ ವಿಚಾರವನ್ನು ಕೂಲಂಕಷವಾಗಿ ಅರಿತು ವರ್ತಿಸಿದರೆ ಪರರ ದುಃಖವು ನಮ್ಮದು. ಪರಪೀಡೆಯು ಪಾಪಕರ. ಪರೋಪಕಾರವು ಪಾರಮಾರ್ಥಿಕ. ನಿರ್ಮಲಸ್ನೇಹ ತ್ಯಾಗಗಳಿಂದ ಕೂಡಿದ ಜೀವನವೇ ಉತ್ತಮ ಜೀವನ - ಎಂಬೀ ಜೀವನ ತತ್ವಾರ್ಥಗಳನ್ನು ಪುಷ್ಟೀಕರಿಸುವ ಕಥಾಸಂವಿಧಾನವು ಶ್ರೀಯುತರ ನಾಟಕಗಳಲ್ಲಿ ವಸ್ತುಗಳಾಗುವುವು.

ಸಾಮಾಜಿಕ ನಾಟಕಗಳೆಂದು, ಕೇವಲ ಶೃಂಗಾರ ರಸಪ್ರಧಾನ ಕಥಾವಸ್ತುವನ್ನೋ ವಿಧವಾವಿವಾಹ ಮುಂತಾದ ಒಂದೆರಡು ಪ್ರಶ್ನೆಗಳನ್ನೋ ಮುಂದುಮಾಡಿಕೊಂಡು ರಚನೆಯಾಗುತ್ತಿದ್ದ ಪದ್ಧತಿಗಿಂತ, ಜೀವನದ ಸಕಲ ಕ್ಷೇತ್ರಗಳನ್ನೂ ಅನುಲಕ್ಷಿಸಿ ಅವುಗಳ ಸುಧಾರಣೆಗೆ ಪ್ರಯತ್ನಿಸುವ ಶ್ರೀಮಾನ್ ಅಯ್ಯಂಗಾರ್ಯರ ಈ ಉದ್ಯಮವು ನಿಜವಾಗಿಯೂ ಕನ್ನಡ ಸಾಹಿತ್ಯಸೇವೆಯಲ್ಲಿ ಒಂದು ಪ್ರತ್ಯೇಕ ಪ್ರಗತಿಮಾರ್ಗದರ್ಶಕ ಕಾರ್ಯವೆನ್ನಲಡ್ಡಿಯಿಲ್ಲ. ಪ್ರೋತ್ಸಾಹ ಹೆಚ್ಚಿದಂತೆಲ್ಲಾ ಇವರ ಈ ಸೇವೋದ್ಯಮವೂ ಅಭಿವೃದ್ಧಿಗೊಂಡೀತೆನ್ನಲು ಸಂದೇಹವಿಲ್ಲ.

**ಸುಬೋಧ—ಬೆಂಗಳೂರು, ಏಪ್ರೆಲ್ 1938.**

## SOME OPINIONS



### Regarding 'Lobhi' and 'Vidhi' in Kanarese.

Rajakarya Prasaktha
Rao Bahadur M. SHAMA RAO, M.A.,
*(Retd. I.G. of Education in Mysore.)*

Chamarajpet, Bangalore.
*7th February, 1938.*

Dear Mr. Ramaswami Iyengar,

I thank you for the copy of your social play in Kanarese called **'Lobhi'** which duly reached me. I have read it with very great interest and I am gald to say that the characters are well depicted and that the conversations are spicy.

Yours sincerely,
(Sd.) M. SHAMA RAO.

T. RAGHAVA, B.A., B.L.,
Advocate.

Bellary,
1—2—38.

Dear Sir,

I read your book **'Lobhi'** with great interest. It makes very fine reading indeed. .......... ........................

With best wishes.

Yours sincerely,
(Sd.) RAGHAV.

**LEGISLATIVE COUNCIL,**

The hon'ble,
DR. U. RAMA RAU,
Madras, 26th January' 38.

Dear Mr. Ramaswami Iyengar,

I am in receipt of your kind letter and also a copy of the book entitled **'Lobhi'**. I have perused the book. The book being written in very colloquial style, affords interesting reading. It is a well thought out plot, and it deserves to be widely read.

Yours sincerely,
(Sd.) U. RAMA RAU.

A. R. KRISHNA SASTRI, M.A.,
Assistant Professor of Kannada.

CENTRAL COLLEGE,
Bangalore, 18th January 38.

Dear Sir,

Thank you for your kind letter of yesterday and the book '**LOBHI**'. I had already read the book in some other connection and found it interesting. I am sure it will be a roaring success on the stage.

Yours sincerely,
(Sd.) A. R. KRISHNA SASTRI.

DR. M. H. KRISHNA, M.A , D.LIT. (LOND.)
Professor of History, University of Mysore
& Director of Archaeology,
Mysore State.

Mysore,
*27th February 1938*

Dear Mr. Ramaswami Iyengar,

I thank you very much for presenting me with a copy of your social drama, '**Lobhi**' or '**Karpanya**'. I have read it with much interest and found it enjoyable. I believe you have a future in Kannada literature. May I suggest, however, that you may produce a paly involving, if possible. some autobiogra phical experience ? In my personal experience such would be the most appealing thing.............................................

May I suggest also that you may get into touch with film producers and see one of your plays screened ?

Wishing you every success in your literary career.

I remain,
Yours sincerely,
M. H. KRISHNA.

Rajakarya Prasaktha,
Rao Bahadur, M. SHAMA RAO, M.A.
*Retd. I G. of Education in Mysore.*

Chamarajapet, Bangalore,
*28th March 1938.*

Dear Mr. Ramaswamy Iyengar.

I thank you for the copy of your new play in Kannada **'Vidhi'** which you kindly sent me a few days ago. I have read it with very great interest and several features of our society which you depict should arrest our attention. The language throughout is easy and attractive.

Yours sincerely,
M. SHAMA RAO.

---

## THE THOUGHT FOR THE HOUR

'One of the illusions is that the present hour is not the critical decisive hour. Write it in your heart that every day is the best day of the year.'

'If we avoid sympathy and wrap ourselves around in a cold chain armour of selfishness, we exclude ourselves from many of the greatest and purest joys of life"

'Nothing can work me damage except myself; the harm that I sustain, I carry about with me, and never am I a real sufferer but by my own fault '—*St. BERNARD.*

'A very wise man once said: 'We sell only our own thoughts and in some way or other they become externalised as our own environments and experiences, and so the world we seem to be experiencing 'without' is really the world we are seeing "within".

The world would be a better and brighter place if our teachers would dwell on the duty of Happiness as well as the Happiness of duty ; for we ought to be as cheerful as we can, if only because to be happy ourselves, is a most effectual contribution to the happiness of others.

## POVERTY

Let us begin at the root of all economic evils—Poverty.

Listen to Henry George: '.........poverty is the hell of which the modern Englishman is most afraid. And he is right. Poverty is the open-mouthed, relentless hell which yawns beneath civilised society. And it is hell enough. For poverty is not merely deprivation ; it means shame, degradation ; the searing of the most sensitive parts of our moral and mental nature as with hot irons ; the denial of the strongest impulses and the sweetest affections ; the wrenching of the most vital nerves'.

He is quite right.

# “ ನ್ಯಾಯ

## ನೂತನ ಸಾಮಾಜಿಕ

ಲೇಖಕರು :

**ಬಿ. ಎಸ್. ರಾಮಸ್ವಾಮಿ ಅಯ್ಯಂಗಾರ್**

| | | |
|---|---|---|
| ಬೆಲೆ | ಸಾದಾ ಪ್ರತಿ | 8 ಆಣೆ |
| | ಉತ್ತಮ ಪ್ರತಿ | 12 ಆಣೆ |

---

ಪ್ರತಿಗಳು ದೊರೆಯುವ ಸ್ಥಳ

ಮೆಸರ್ಸ್ ಹಿಗ್ಗಿನ್ ಬಾತಮ್ಸ್ ರೈಲ್ವೆ ಬುಕ್ ಸ್ಟಾಲುಗಳು.
ಮಂಗಳೂರು ಬಾಸೆಲ್ ಮಿಷನ್ ಬುಕ್‌ಡಿಪೋ.
ಎಂ. ವಿ. ಶೇಷಾದ್ರಿ, ಅಂಡ್ ಕಂಪೆನಿ, ಬಳೇಪೇಟೆ ; ಬೆಂಗಳೂರು ಸಿಟಿ.
ಶ್ರೀನಿವಾಸ್ ಅಂಡ್ ಸನ್ಸ್, ಸಂಪಿಗೆ ರೋಡು, ಮಲ್ಲೇಶ್ವರ, ಬೆಂಗಳೂರು.
ಹೆಚ್. ವೆಂಕಟರಾಮಯ್ಯ ಅಂಡ್ ಸನ್ಸ್, 100 ಅಡಿ ರಸ್ತೆ, ಮೈಸೂರು.
ಎಸ್. ಎಸ್. ಎನ್. ಬುಕ್ ಡಿಪೋ, ನ್ಯೂ ಮಾರ್ಕೆಟ್, ಬೆಂಗಳೂರು ಸಿಟಿ.
ಯು. ಆರ್. ಷೆಣೈ ಅಂಡ್ ಸನ್ಸ್, ಕಾರ್ ಸ್ಟ್ರೀಟ್, ಮಂಗಳೂರು. (ದ. ಕ )
ಹರಿಹರ ಪುಸ್ತಕಾಲಯ, ಪುತ್ತೂರು, ದ.ಕನಡ.

ಅಥವಾ

ಪ್ರಕಾಶಕರು :

ನಾಟಕ ಸಾಹಿತ್ಯ ಸಂಘ,

12, B, ತಂಬುಚೆಟ್ಟಿ ಬೀದಿ, ಜಾರ್ಜ್ ಟೌನ್, ಮದರಾಸು.

*



…ತ್ಯ ಸಂಘ,
…ವೀದಿ, ಜಾರ್ಜ್ ಟೌನ್, ಮದರಾಸು.

---

**ಸೂಚನೆ:**



---

ಮುದ್ರಣಕಾರರು:
ಸುಬೋಧ ಮುದ್ರಣಾಲಯ, ಬೆಂಗಳೂರು ನಗರ
1938